# ರಮೇಶ ಹುಲ್ಲುಕೆರೆಯವರ ಕಥಾ ಸಾಹಿತ್ಯ

ಕನ್ನಡ ಎಂ.ಫಿಲ್ ಪದವಿಗಾಗಿ

ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸಿದ ಎಂ.ಫಿಲ್. ನಿಬಂಧ

ಸಂಶೋಧಕರು

.ಪ್ರಕಾಶ .ಸಿ.

ಮಾರ್ಗದರ್ಶಕರು

ಡಾ.ಚಿಕ್ಕಮರಳಿ ಬೋರೇಗೌಡ

ಕರ್ನಾಟಕ ಸಂಘ (ರಿ), ಮಂಡ್ಯ

ಎಂಎಲ್ ಶ್ರೀಕಂಠೇಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿ.ವಿ ಹಂಪಿಮಾನ್ಯತೆ ಪಡೆದಿದೆ) 2011-12

# ರಮೇಶ್ ಹುಲ್ಲುಕೆರೆಯವರ ಕಥಾ ಸಾಹಿತ್ಯ

ಕನ್ನಡ ಎಂ.ಫಿಲ್ ಪದವಿಗಾಗಿ

ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸಿದ ಎಂ.ಫಿಲ್ ನಿಬಂಧ

**ಸಂಶೋಧಕರು**

[illegible]. ಪ್ರಕಾಶ. ಸಿ.

**ಮಾರ್ಗದರ್ಶಕರು**

ಡಾ.ಚಿಕ್ಕಮರಳಿ ಬೋರೇಗೌಡ

ಕರ್ನಾಟಕ ಸಂಘ (ರಿ), ಮಂಡ್ಯ

ಎಂಎಲ್ ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿ.ವಿ ಹಂಪಿಮಾನ್ಯತೆ ಪಡೆದಿದೆ) 2011-12

# ಮಾರ್ಗದರ್ಶಕರ ದೃಢೀಕರಣ ಪತ್ರ

ಶ್ರೀ ರಮೇಶ ಹುಲ್ಲುಕೆರೆಯ ಅವರ ಸಾಹಿತ್ಯ ಎಂಬ ಈ ನಿಬಂಧವನ್ನು ಕನ್ನಡ ...ಶ್ವವಿದ್ಯಾನಿಲಯದ ಎಂ.ಫಿಲ್ (ಕನ್ನಡ) ಪದವಿಗಾಗಿ ಸಿ.ಪ್ರಕಾಶ ಅವರು ನನ್ನ ...ಾರ್ಗದರ್ಶನ ಹಾಗೂ ಮೇಲ್ವಿಚಾರಣೆಯಲ್ಲಿ ಬರೆದು ಒಪ್ಪಿಸುತ್ತಿದ್ದಾರೆ. ಹಾಗೂ ಪ್ರಸ್ತುತ ...ಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗೆ ...ಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಮಾರ್ಗದರ್ಶಕರ ಸಹಿ**

ಡಾ.ಬೋರೇಗೌಡ ಚಿಕ್ಕಮರಳಿ
ಸಂಪನ್ಮೂಲವ್ಯಕ್ತಿ
ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ
ಕರ್ನಾಟಕ ಸಂಘ (ರಿ), ಮಂಡ್ಯ

...ಳ : ಮಂಡ್ಯ

...ದಿನಾಂಕ : 27-06-2012

# ಸಂಶೋಧಕರ ಪ್ರಮಾಣ ಪತ್ರ

ಹಂಪಿ ವಿಶ್ವವಿದ್ಯಾನಿಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್.ಶ್ರೀಕಂಠೇಗೌಡ ಸಂಶೋಧನಾ ಕೇಂದ್ರದಲ್ಲಿ 2011–12 ನೇ ಸಾಲಿನ ಕನ್ನಡ ಎಂ.ಫಿಲ್ ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು ''ಶ್ರೀ ರಮೇಶ್ ಹುಲ್ಲುಕೆರೆಯವರ ಕಥಾ ಸಾಹಿತ್ಯ''ವನ್ನು ಆಯ್ಕೆ ಮಾಡಿಕೊಂಡು ಡಾ|| ಚಿಕ್ಕಮರಳಿ ಬೋರೇಗೌಡ ರವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧ ರಚಿಸಿರುತ್ತೇನೆ.

ಈ ನಿಬಂಧವನ್ನಾಗಲೀ ನಿಬಂಧದ ಯಾವುದೇ ಅಧ್ಯಾಯವನ್ನು ಬೇರೆ ಎಲ್ಲಿಯೂ ಪ್ರಕಟಿಸಿರುವುದಿಲ್ಲ. ಮತ್ತು ಕನ್ನಡ ವಿಶ್ವವಿದ್ಯಾನಿಲಯವು ನೀಡುವ ಎಂ.ಫಿಲ್ ಕನ್ನಡ ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

ಪ್ರಕಾಶ.ಸಿ.

ಸಂಶೋಧಕರು

ಕನ್ನಡ ವಿಭಾಗ

**ಕರ್ನಾಟಕ ಸಂಘ (ರಿ), ಮಂಡ್ಯ**

ಎಂಎಲ್ ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿ.ವಿ ಹಂಪಿಮಾನ್ಯತೆ ಪಡೆದಿದೆ) 2011–12

ಸ್ಥಳ : ಮಂಡ್ಯ

ದಿನಾಂಕ : 27–06–2012

## ಪರಿವಿಡಿ

# ಅಧ್ಯಾಯ – ೧

## ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

ಭಾರತೀಯ ಸಾಹಿತ್ಯ ಕ್ಷೇತ್ರದಲ್ಲಿ ಕನ್ನಡ ಸಾಹಿತ್ಯಕ್ಕೆ ತನ್ನದೇ ಆದ ವಿಶಿಷ್ಠ ಸ್ಥಾನವಿದೆ. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಓದದೆ ಬರೆಯದೆ ಸಾಹಿತ್ಯ ರಚಿಸುವ ಕಲಾತ್ಮಕತೆ ಇದೆ. ಹಾಗೇಯೇ ಸಾಹಿತ್ಯೇತರ ಕ್ಷೇತ್ರಗಳಲ್ಲಿ ಅಧ್ಯಯನಮಾಡಿ ವಿಶೇಷ ಪ್ರೇರಣೆಗೆ ಒಳಗಾಗಿ, ಸಾಹಿತ್ಯ ಕ್ಷೇತ್ರವನ್ನು ಪ್ರವೇಶ ಮಾಡಿ ಕೃಷಿ ಮಾಡಿದ ನಿದರ್ಶನಗಳೂ ಇವೆ.

ಇಂತಹ ಅಪರೂಪವೆನಿಸಿದ ನಿದರ್ಶನಗಳಲ್ಲಿ ರಮೇಶ ಹುಲ್ಲುಕೆರೆ ಒಬ್ಬರು. ವಿಜ್ಞಾನ ಕ್ಷೇತ್ರದಿಂದ ಸಾಹಿತ್ಯ ಕ್ಷೇತ್ರವನ್ನು ಪ್ರವೇಶ ಪಡೆದ ಕೆಲವೇ ಶಕ್ತ ಲೇಖಕರಲ್ಲಿ ರಮೇಶ್ ಹುಲ್ಲುಕೆರೆ ಪ್ರಮುಖರು. ಅತ್ಯಂತ ಬೇಗ ಸಾಹಿತ್ಯಿಕ ಮತ್ತು ಪತ್ರಿಕಾ ರಂಗದಲ್ಲಿ ಬೆಳೆದು. ಅಷ್ಟೇ ಬೇಗನೆ ದೂರವಾದ ದುರಾದೃಷ್ಟ ಲೇಖಕರೂ ಕೂಡ ಹೌದು.

20ನೇ ಶತಮಾನದಲ್ಲಿ ಮನುಷ್ಯನು ತನ್ನ ಬದುಕನ್ನು ಇಷ್ಟೊಂದು ಗಂಭೀರವಾಗಿ ತೆಗೆದು ಕೊಂಡಿದ್ದಾನಲ್ಲ. ಎಂಬುದರ ಆದ್ಭುತವಾದ ರಚನೆ ಹುಲ್ಲುಕೆರೆಯವರದಾಗಿತ್ತು. ಇದರಿಂದಾಗಿ ಸಾಹಿತ್ಯದ ಕೃಷಿಯು ಪ್ರಮುಖ ಸಾಲಿನಲ್ಲಿ ನಿಲ್ಲುತ್ತದೆ.

ರಮೇಶ್ ಹುಲ್ಲುಕೆರೆಯವರು ಸರಳ ಜೀವನದ ವ್ಯಕ್ತಿತ್ವ ಉಳ್ಳವರಾಗಿದ್ದು ಬೇರೆಯವರು ಹೇಳುವ ಮಾತಿಗೆ ಬೆಲೆ ಕೊಡುವ ಸಜ್ಜನಿಕೆಯ ವ್ಯಕ್ತಿತ್ವ ಅವರದಾಗಿತ್ತು.

ರಮೇಶ್ ಹುಲ್ಲುಕೆರೆ. ಅವರ ಸಾಹಿತ್ಯದಲ್ಲಿ ಕಂಡು ಬರುವ ಅಭಿವ್ಯಕ್ತಿ ಛಾಯ ಹಾಗೂ ಪ್ರತಿಮಾತ್ಮಕತೆಯ ಮೇಲೆ ನವ್ಯ ಸಾಹಿತ್ಯದ ಪ್ರಭಾವ ಇರುವಂತೆ ಭಾಸವಾಗುತ್ತದೆ.
ಈ ದೃಷ್ಠಿಯಲ್ಲಿ ಅವರ ಕತೆಗಳು ತುಂಬಾ ಕಲಾತ್ಮಕವೆನಿಸುತ್ತವೆ. ಕತೆಯಲ್ಲಿ ಕಂಡು ಬರುವ ಅಸ್ಪಷ್ಟತೆ ಎಂಬುದು ಒಂದು ದೇ಼ವಾಗಿ ಕಂಡು ಬರದೆ ನೆಲಮೊಮ್ಮೆ ಗುಣವಾಗಿಯೂ ಪರಿಣಮಿಸಿದೆ.

ಗ್ರಾಮೀಣ ಮತ್ತು ನಾಗರೀಕ ಅನುಭವ ಎರಡನ್ನು ಒಂದೆಡೆ ತಾರಕ ಸಂದರ್ಭದಲ್ಲಿ ಸೇರಿಸುವ ಪ್ರಯತ್ನ ಸಾಹಿತ್ಯದ ಮೂಲಕ ವ್ಯಕ್ತಗೊಂಡಿದೆ.

ನವೋದಯ ಹಾಗೂ ಪ್ರಗತಿಶೀಲ ಕಾಲದಲ್ಲಿನ ಸಾಹಿತಿ ಪತ್ರಿಕೋದ್ಯಮದ ವಿರಳ ಪರಂಪರೆ ಚರಿತ್ರೆಯಲ್ಲಿದೆ. ಆ ಗುಂಪಿಗೆ ಸೇರಿದವರು ರಮೇಶ್ ಹುಲ್ಲುಕೆರೆಯವರು. ವ್ಯಕ್ತಿ ಮತ್ತು ಪ್ರವೃತ್ತಿಯಲ್ಲಿ ವ್ಯತ್ಯಾಸ ಕಾಣುವುದಿಲ್ಲ. ನವ್ಯ ಬರಹಗಾರರು ಪತ್ರಿಕೆ ನಡೆಸುತ್ತಾ. ಸಾಹಿತ್ಯ ಬರೆಯುವ ಪ್ರವೃತ್ತಿ ಕಾಣುತ್ತೇವೆ.

ಸಾಮಾಜಿಕ ಪ್ರಗತಿಯಲ್ಲಿ ರಮೇಶ್ ಹುಲ್ಲುಕೆರೆಯವರು ಪತ್ರಿಕೆ ರಂಗವನ್ನು ಮುಂದಿಟ್ಟುಕೊಂಡು ಕೆಲಸ ಮಾಡಿದ್ದಾರೆ. ಪತ್ರಕರ್ತರಾಗಿ ವಿಶಿಷ್ಟ ಸೇವೆಸಲ್ಲಿಸಿ

ಬರಹಗಾರರಾಗಿದ್ದಾರೆ. ಕಥೆ, ಕಾದಂಬರಿ, ನಾಟಕ, ಬರೆದಿದ್ದಾರೆ. ಮಂಡ್ಯಜಿಲ್ಲೆ ಕನ್ನಡಕ್ಕೆ ನೀಡಿದ ಒಳ್ಳೆಯ ಕಥೆಗಾರ ಎನಿಸಿದ್ದಾರೆ. ಯಾವುದೇ ಸಾಹಿತಿಗೆ ಧಾರ್ಮಿಕ ಬದ್ಧತೆಗಿಂತ ಸಾಮಾಜಿಕ ಬದ್ಧತೆ ಅನಿವಾರ್ಯವಾದುದು. ಸಾಮಾಜಿಕ ಅರಿವಿನ ಅಗತ್ಯ ಇರುತ್ತದೆ. ಕಾರಣ ಇಷ್ಟೆ.

ಯಾವುದೇ ಒಂದು ಉತ್ತಮ ಸಮಾಜದ ನಿರ್ಮಾಣಕ್ಕೆ ಹಾಗೂ ಅದರ ಅಭಿವೃದ್ಧಿಗೆ ಸಾಹಿತ್ಯದ ಮೂಲಕ ಸಾರ್ಥ ಎಂದರೇ ಅತಿಶಯೋಕ್ತಿ ಇಲ್ಲ.

**ಉದಾ** :- ಬಸವಣ್ಣನವರು ಮಾನವನ ಬದುಕಿನ ಜಂಜಾಟವನ್ನು ತಮ್ಮ ವಚನ ಸಾಹಿತ್ಯದ ಮೂಲಕ ವ್ಯಕ್ತಪಡಿಸಿರುವುದು ಮತ್ತು ಅದರಂತೆಯೇ ಅಂದಿನ ಸಮಾಜವು ಪರಿಣಾಮಕಾರಿಯಾಗಿರುವುದು. ಸತ್ಯ ಸಂಗತಿಯಾಗಿದೆ. ಹಾಗೂ ಅದು ಇಂದಿಗೂ ಕೂಡ ಮಾದರಿಯಾಗಿದೆ.

ಹಾಗೆಯೇ ಅಂತಹ ಸಾಮಾಜಿಕ ಬದ್ಧತೆಯನ್ನು ಮೈಗೂಡಿಸಿಕೊಂಡಿರುವ ರಮೇಶ ಹುಲ್ಲುಕೆರೆ ಅವರು ಲೇಖಕರಿಗಿಕಬೇಕಾದ ಸರ್ವಗ್ರಾಸ ದೃಷ್ಟಿಯನ್ನು ಸಾಧಿಸಿದ್ದಾರೆ.

ರಮೇಶ್ ಹುಲ್ಲುಕೆರೆಯವರು ನಮ್ಮ ಸಾಹಿತ್ಯದ ರಚನೆಯ ಸಂಧರ್ಭದಲ್ಲಿ ಮಾನವನ ಜೀವನವನ್ನು ಕುರಿತು ಎಷ್ಟು ಗಂಭೀರವಾಗಿ ಪರಿಣಮಿಸಿದ್ದಾನೆ. ಮತ್ತು ಅದರ ಪರಿವರ್ತನೆ ಹೇಗೆ ಎಂಬುದರ ವಾಸ್ತವ ಸಂಗತಿಯನ್ನು ತಮ್ಮ ಲೇಖನದಲ್ಲಿ ಪ್ರಚುರ ಪಡಿಸಿರುವುದು ಗಮನಾರ್ಹ. ವಿಷಯವಾಗಿದೆ.

"ತೆಂಡೆ" ಲೇಖಕರ ಮೊದಲ ಕಾದಂಬರಿ. ಅಲ್ಲಿನ ಬೋರದೇವರ ಗುಡಿಯ ಹಕ್ಕು ಹಾಗೂ ಒತ್ತುವರಿ ಜಮೀನಿನ ಹಕ್ಕು ಮುಖ್ಯಕಾರಣವಾಗಿ ರಕ್ತ ಸಂಬಂಧಿಗಳೇ ಆದ. ಕಲ್ಲುಕೆರೆ ಹಾಗೂ ದೊಡ್ಡಿಯ ಜನರ ಬದುಕು ದುರಂತದಲ್ಲಿ ಪರ್ಯಾವಸನಗೊಳ್ಳುವುದನ್ನು ಕಾದಂಬರಿ ಬಹಳ ಅರ್ಥವತ್ತಾಗಿ ಚಿತ್ರಿಸಿರುತ್ತದೆ.

'ಸಾಕ್ಷಿ' ಎಂಬ ಕಥಾ ಸಂಕಲನದಲ್ಲಿ ಕಂಡುಬರುವ ಗೆಲುವು ಸೋಲು, ಸಿದ್ಧತೆ. ಅಸಂಗತ, ಸಾಕ್ಷಿ.ಸ್ಥಿತಿ ಆಕ್ರಮಣ, ಇಂತಹ ನಾಕಥೆಗಳನ್ನೊಳಗೊಂಡ ಸಾಕ್ಷಿ ಕಥಾ ಸಂಕಲನವು ಒಂದೊಂದು ಕಥೆಯಲ್ಲಿಯೂ ಒಂದೊಂದು ತರನಾದ ಅಭಿವ್ಯಕ್ತಿಯನ್ನು ವ್ಯಕ್ತಪಡಿಸಿದ್ದಾರೆ. ಇಲ್ಲಿ ಸಾಕ್ಷಿ ಸಂಕಲನದ ಕತೆಗಳಲ್ಲಿ ಒಂದೆರಡನ್ನು ಬಿಟ್ಟರೆ. ಉಳಿದವು ಪ್ರಾದೇಶಿಕ ಎನ್ನು ಬಹುದಾಗಿದೆ. ವಿಶಿಷ್ಠ ಸ್ವರೂಪ ರಚನೆಗಳಾಗಿವೆ.

ಅಚ್ಚಗನ್ನಡದ ಭಾಗವಾದ ಮಂಡ್ಯ ಜಿಲ್ಲೆಯ ಹೃದಯ ಭಾಗವನ್ನು ಗುರುತಿಸುವ ಸಲುವಾಗಿ ತಮ್ಮ ಹುಟ್ಟೂರಿನ ಪರಿಸರವನ್ನೇ ತಮ್ಮ ಕತೆಗಳಿಗೆ ಹಾಸಿ ಹೊದಿಸಿದ್ದಾರೆ.

ಮಂಡ್ಯ ಜಿಲ್ಲೆಯ ಖನಿ, ಜೀವನದ ಧ್ವನಿ, ಈ ಎರಡೂ ಇವರ ಬರಹಗಳಲ್ಲಿ ತುಂಬ ಪರಿಣಾಮಕಾರಿಯಾಗಿ ಧ್ವನಿತವಾಗಿವೆ. ಈ ಪರಂಪರೆಯಲ್ಲಿ ರಮೇಶ್ ಹುಲ್ಲುಕೆರೆಯವರು ಎದ್ದು ತೋರುವ ಹೆಸರಾಗಿದ್ದಾರೆ.

"ಸೊಗಡು", ಕಥಾ ಸಂಕಲನದಲ್ಲಿಯು ಸಹ. ಏಳುಕಥೆಗಳು ಇವೆ. ಅವುಗಳೆಂದರೆ. ಕಲ್ಲುಮಲೆ, ಸಾವು, ಕನಸುಗಳು" ಕಣ್ಣಳತೆಯೊಳಗಿಂದ' 'ನೀರು' ಸೊಗಡು ಇಲ್ಲಿಯು ಸಹ ಪರಿಸರ ಜನತೆಯ ವಿಚಾರ ಧಾರೆಯನ್ನು ವ್ಯಕ್ತಪಡಿಸಿದ್ದಾರೆ. "ಮಂಥರೆ" ತೆಂಡೆ "ಪುಲ್ಲೆ" "ಕೂಗುತಿದೆ ಕಲ್ಲು" ದೊರೆ ಲಂಕೇಶ್ವರ ಹಾಗೂ " ಹತ್ತುವರ್ಷದ ಸಣ್ಣ ಕತೆಗಳು" ಎಂಬ ವಿಮೆರ್ಶಾ ಲೇಖನಗಳನ್ನು ಬರೆದಿದ್ದಾರೆ. "ವೀಕ್ಷಕ" ದಿನಪತ್ರಿಕೆಯ ಸಂಪದಕಾರಾಗಿ ಪತ್ರಿಕಾ ಕ್ಷೇತ್ರದಲ್ಲೂ ಕೂಡ ಕ್ರಾಂತಿಕಾರಿ ಕೆಲಸ ಮಾಡಿದ್ದಾರೆ. ಈ ಬಗೆಯ ವ್ಯಕ್ತಿತ್ವದಿಂದಲೇ ನಾವು ಅವರನ್ನು ಶ್ರದ್ಧೆಯಿಂದ ಮನಃ ಪೂರ್ವಕವಾಗಿ ನೆನಪಿಸಿಕೊಳ್ಳಲು ಸಾಧ್ಯವಾಗಿರುವುದು ಮತ್ತು ಇದು ಸತ್ಯಕ್ಕೆ ಹತ್ತಿರವಾದ ಮಾತು. ಈ ಕಾರಣಕ್ಕಾಗಿ ಹುಲ್ಲುಕೆರೆಯವರ ಕಥಾ ಸಾಹಿತ್ಯವನ್ನು ಹಾಗೂ ಇವರ ಬರಹಗಳ ಸ್ಥೂಲವಾದ ಅಧ್ಯಯ ನಮ್ಮ ಉದ್ದೇಶವನ್ನು ಸಂಕ್ಷಿಪ್ತವಾಗಿ ನೋಡಲಾಗಿದೆ.

**ಅಡಿ ಟಿಪ್ಪಣಿಗಳು:**

"ಅಭಿವ್ಯಕ್ತಿ ಪುಸ್ತಕ" ಸಂಪಾದಕರು (ರಾಗೌ) ರವರು

ಲೇಖನ (ಕ್ಯಾತನಹಳ್ಳಿ ರಾಮಣ್ಣ) ನವರು

ಪುಟ ಸಂಖ್ಯೆ ೧೫

೧೯೭೫ರ ವೀಕ್ಷಕ ವಾರ ಪತ್ರಿಕೆ (ಸಂಪಾದಕರು ಶ್ರೀ ಹೆಚ್.ವಿ.ರಮೇಶ್) ರವರು

(೧೯೭೩ ರ ಮಾರ್ಚ್‌ರ ವಾರ ಪತ್ರಿಕೆ)

# ಅಧ್ಯಾಯ – ೨

## ರಮೇಶ ಹುಲ್ಲುಕೆರೆ : ಪರಿಚಯ

| | |
|---|---|
| **ಸ್ಥಳ :** | ಮಂಡ್ಯ ತಾಲ್ಲೂಕು, ಕೊತ್ತತ್ತಿ ಹೋಬಳ, ಹುಲ್ಲುಕೆರೆ |
| **ಜನ್ಮದಿನಾಂಕ :** | 4-5-1947 (56ನೇ ವರ್ಷ) |
| **ವಾಸ :** | ರಮೇಶ ಹುಲ್ಲುಕೆರೆ 'ವೀಕ್ಷಕ' ಡೋ.ನಂ.2074,1ನೇ ಮೇಯಿನ್, 4ನೇ ಮುಖ್ಯರಸ್ತೆ ಕೆ, ಮರೀಗೌಡ ಬಡಾವಣೆ ಮಂಡ್ಯ571401 ದೂರವಾಣಿ : 08236-220843, |
| **ತಂದೆ :** | ಬೋಳೇಗೌಡ, ತಾಯಿ: ತಾಯಮ್ಮ, ದತ್ತು ತಂದೆ: ಚನ್ನೇಗೌಡ ತಾಯಿ:ಗಿರಿಗಮ್ಮ |
| **ಪತ್ನಿ:** | ಟಿ.ಹೇಮಲತಾ ರಮೇಶ, ಪುತ್ರ : ಆರ್.ಚಂದನ್ |
| **ಶಿಕ್ಷಣ :** | ಪ್ರಾಥಮಿಕಶಾಲೆ ; ಹುಲ್ಲುಕೆರೆ, ಮಾಧಮಿಕ ಶಾಲೆ: ಕೊತ್ತತ್ತಿ, ಪ್ರೌಢಶಾಲೆ ಮೈಷುಗರ್ ಮಂಡ್ಯ. ಪಿ.ಯು.ಸಿ. : ಯುವರಾಜ ಕಾಲೇಜು, ಮೈಸೂರು, |
| **ಪದವಿ;** | ಜೆ.ಎಸ್.ಎಸ್.ಕಾಲೇಜು-ಮೈಸೂರು, ಎಂ.ಎ., (ಕನ್ನಡ) ಮೈಸೂರು (ತೆರೆದ) ವಿಶ್ವವಿದ್ಯಾನಿಲಯ, ಮೈಸೂರು, ಸಂಪಾದಕ: ವೀಕ್ಷಕ ಕನ್ನಡ ದಿನಪತ್ರಿಕೆ ಪ್ರತಿಕೋದ್ಯಮ, ಹಾಗೂ ರೈತ. |
| **ವೃತ್ತಿ:** | ಸಾಹಿತಿ |
| **ಕೃತಿಗಳು:** | ಕಾದಂಬರಿ: 1) ತೆಂಡೆ, 2) ಡಕಾಯಿತರಾಣಿ ಪುತ್ಲಿ 3) ಕಣ್ಣಳತೆಯೊಳಗಿಂದ 4) ನನ್ನೊಬ್ಬನದೇ ಆತ್ಮಕತೆಯಲ್ಲ, |
| **ಕಥಾಸಂಕಲನ:** | 1)ಸಾಕ್ಷಿ, 2) ಕಲ್ಲುಮಲೆ 3) ಕಾಡುಗಿಡಗಳು, (ಸಂಪಾದಿತ : ಮಂಡ್ಯ ಜಿಲ್ಲೆಯ ಪ್ರಥಮ ಪ್ರಾತಿನಿಧಿಕ ಕಥಾ ಸಂಕಲನ) 1) ದ್ವಂದ್ವ : (ದೀಪಾವಳ ಸಂಚಿಕೆಗಳಗೆ ಅನುವಾದಿಸಿದ ವಿವಿಧ ಲೇಖಕರ ಇಂಗ್ಲೀಷ್ ಕಥೆಗಳು) |
| **ನಾಟಕ :** | 1) ಮಂಥರೆ, 2) ದೊರೆ ಲಂಕೇಶ್ವರ (ಪೌರಣಿಕ) 3) ದೇವರಾಗು 4) ತೆಂಡೆ, 5) ಕೊಳಲ ಗೆಳೆಯರು (ನವಸಾಕ್ಷರರಿಗಾಗಿ |

ಬರೆದಿರುವ ನಾಟಕ)

**ಮಿಮರ್ಶೆ :** 1) ಮಂಡ್ಯ ಜಿಲ್ಲೆಯ ಸಣ್ಣ ಕತೆಗಳು, 2) ಮಂಡ್ಯ ಜಿಲ್ಲೆಯ ನಾಟಕಗಳು 3) ದರ್ಶವಾರ್ಷಿಕ ಸಣ್ಣ ಕತೆಗಳು.

**ಚೂರುಪಾರು:** 1) ನಾಕಂಡ ವ್ಯಕ್ತಿಗಳು (ವಿವಿಧ ಅಭಿನಂದನಾ ಗ್ರಂಥಕ್ಕೆ ಬರೆದ ವ್ಯಕ್ತಿ ಚಿತ್ರ)

2) ವಿಡಂಬನೆ: ಕಚಗುಳ (ವಿವಿಧ ಪತ್ರಿಕೆಗಳಗೆ ಬರೆದ ಲೇಖನಗಳು)

**ಉಪನ್ಯಾಸ ಮಾಲಿಕೆ:**ರಾಮಾಯಣದರ್ಶನಂ ಕೃತಿಯಲ್ಲಿ: 1)ಸ್ವಪ್ನಗಳು, 2)ಅನಲೆ 3)ಕುವೆಂಪುರವರ 'ದರ್ಶನ' ,ಅಣ್ಣನ ಕಲ್ಯಾಣಕ್ರಾಂತಿ, ಅಕ್ಕನ ವಿಚಾರ

ಕ್ರಾಂತಿ, ಮಹಾಭಾರತದಲ್ಲಿ ಭಗವಂತನ ಮಿಷ್ಟೇಕ್‌ಗಳು.

**ಇತರೆ :** 1)ಮಾನ್ಯ ಜಿಲ್ಲೆಯ ಪ್ರತಿಕೋದ್ಯಮ 2)ಜಿಲ್ಲೆಯ ಸರಳ ಮದುವೆಗಳು ಮಂಡ್ಯ

**ಸಂಪಾದಕ :** 1) ವೀಕ್ಷಕ ದಿನಪತ್ರಿಕೆ 2) ಸಮೀಕ್ಷಕ (ಸಾಹಿತ್ಯ ಮಾಸಿಕ)

**ಸಂಘಟನೆ/ ಸಮಾಜಸೇವೆ:** 1)ಜಿಲ್ಲಾ ಸಾಮಾಜಿಕ ಆರ್ಥಿಕ ಕ್ರಾಂತಿ ದಳದ ಸಂಸ್ಥಾಪಕ

ಸಂಚಾಲಕ ಜಿಲ್ಲೆಯಲ್ಲಿ ಪ್ರಥಮವಾಗಿ ಹೊರೆಯಾಗದ ಸರಳ ಮದುವೆಗಳ ಅನುಷ್ಠಾನ. ಮೂಢನಂಬಿಕೆಗಳ ವಿರುದ್ಧ ಚಳುವಳ. ಅಸ್ಪೃಶ್ಯತೆಯ ವಿರುದ್ಧ ಸಮರ.

ವರುಣಾನಾಲಾ ವಿರುದ್ಧ ಚಳವಳಗೆ ವೀಕ್ಷಕ ಪತ್ರಿಕೆಯ ಮೂಲಕ ಭೂಮಿಕೆ, ಗೋಕಾಕ್ ಚಳವಳಗಳಲ್ಲಿ ಸಕ್ರಿಯ ಪಾತ್ರ ಕನ್ನಡ ಸಾಹಿತ್ಯ ಸಂಸ್ಕೃತಿ ಹಾಗೂ ಭಾಷಾ ಜನಾಂದೋಲನದಲ್ಲಿ ಹೋರಾಟ.

**ರಾಜಕೀಯ:** 1973ರಿಂದ ಕಾಂಗ್ರೆಸ್ ಕಾರ್ಯಕರ್ತ.

ಮಂಡ್ಯನಗರ ಕಾಂಗ್ರೆಸ್ ಸಮಿತಿಯ ಖಜಾಂಚಿಯಾಗಿ ನೇಮಕ (ಮಾಜಿ)

ಸಾರ್ವತ್ರಿಕ ಚುನಾವಣೆಯಲ್ಲಿ ಮಾನ್ಯ ಮುಖ್ಯಮಂತ್ರಿ ಎಸ್.ಎಂ.ಕೃಷ್ಣರ ನೇತೃತ್ವದಲ್ಲಿ ಕಾಂಗ್ರೆಸ್ ಪಕ್ಷದ

ಗೆಲುವಿಗಾಗಿ ಪ್ರಮುಖ ಪಾತ್ರ.

**ಸಂಘ – ಸಂಸ್ಥೆ :** ಪ್ರಧಾನ ಕಾರ್ಯದರ್ಶಿ, ಅಖಿಲ ಭಾರತ ಸಣ್ಣ ಮತ್ತು ಮಾಧ್ಯಮ ಪತ್ರಿಕೆಗಳ ಒಕ್ಕೂಟ ನವದೆಹಲಿ, ರಾಜ್ಯ ಘಟಕ ಬೆಂಗಳೂರು.

ಮಾಜಿ ಅಧ್ಯಕ್ಷ, ಮಂಡ್ಯ ಜಿಲ್ಲಾ ಕಾರ್ಯ ನಿರತ ಪತ್ರಕರ್ತರ ಸಂಘ, ಮಂಡ್ಯ, ಸದಸ್ಯ, ರಾಜ್ಯ ಕಾರ್ಯನಿರತ ಪತ್ರಕರ್ತರ ಸಂಘ, ಬೆಂಗಳೂರು, ಮಾಜಿ ಅಧ್ಯಕ್ಷ, ಮಂಡ್ಯ ಜಿಲ್ಲಾ ಸಣ್ಣ ಪತ್ರಿಕೆಗಳ ಸಂಪಾದಕರ ಸಂಘ, ಮಂಡ್ಯ.

**ಪ್ರಶಸ್ತಿ/ ಸನ್ಮಾನ :** 44ನೇ ಕನ್ನಡ ರಾಜ್ಯೋತ್ಸವ ಜಿಲ್ಲಾ ಪ್ರಶಸ್ತಿ, ಮಂಡ್ಯ (1999) 'ಅಂಕಣ ಶ್ರೀ' ಆಂದೋಲನ ಪ್ರಶಸ್ತಿ (1999) ಮಂಡ್ಯ ತಾಲ್ಲೂಕು ಸಾಹಿತ್ಯ ಪರಷತ್ತು ಮಂಡ್ಯ ಇವರಿಂದ ಅಭಿನಂದನೆ–ಸನ್ಮಾನ ಮಂಡ್ಯ ಜಿಲ್ಲೆ ಕುವೆಂಪು ಸಾಹಿತ್ಯ ಪರಿಷತ್ತು ಮಂಡ್ಯ ಇವರಿಂದ ಸನ್ಮಾನ. ಮದ್ದೂರು ತಾಲ್ಲೂಕು ಕಾರ್ಯನಿರತ ಪತ್ರಕರ್ತರ ಸಂಘ, ಇವರಿಂದ ಸನ್ಮಾನ ಹಾಗೂ ಹಲವಾರು ಸಾಹಿತ್ಯ ಸಂಘಟನೆಗಳಿಂದ ಸನ್ಮಾನ.

**ಬಹುಮಾನ ;** 'ಸಾಕ್ಷಿ' ಸಣ್ಣ ಕತೆಗೆ 1970ಮತ್ತು 2002ರ ರ ಪ್ರಜಾವಾಣಿ ದೀಪವಾಳಿ ಕಥಾ ಸ್ಪರ್ಧೆಯಲ್ಲಿ ಸಾರ್ವತ್ರಿಕ ದ್ವಿತೀಯ ಮತ್ತು ಕಣ್ಣಳತೆಯೊಳಗಿಂದ ಕತೆಗೆ ನಾಲ್ಕನೆ ಬಹುಮಾನ.

**ಸಿನಿಮಾ:** ಸಂಘರ್ಷ 'ಹೊಸ ಹೆಜ್ಜೆ' ಸಿನಿಮಾಗಳಿಗೆ ಸಂಭಾಷಣೆ (ಚಿತ್ರ ಬಿಡುಗಡೆಯಾಗಿವೆ.)'ಆರಂಭನಿಮಾಕ್ಕೆ' ಸಂಭಾಷಣೆ (ಚಿತ್ರ ಶೂಟಿಂಗ್‌ನಲ್ಲಿದೆ.)

**ಹವ್ಯಾಸ:** ಪೋಟೋಗ್ರಫಿ ನಾಟಕ ನಿರ್ದೇಶನ ಹಾಗೂ ಅಭಿನಯ.

**ಪ್ರಕಾಶನ:** 'ವೀಕ್ಷಕ ಪ್ರಕಾಶ' ಮಂಡ್ಯ. ಇದರ ಆಶ್ರಯದಲ್ಲಿ ಹಲವಾರು ಕನ್ನಡ ಕೃತಿಗಳ ಪ್ರಕಟಣೆ.

ಇವರ ತೆಂಡೆ (ಕಾದಂಬರಿ), ಸಾಕ್ಷಿ (ಕಥಾಸಂಕಲನ) ಹಾಗೂ (ಮಂಥರೆ) ನಾಟಕ ಪ್ರಕಟಗೊಂಡಿರುವ ಕೃತಿಗಳು, 1971ರಲ್ಲಿ ಮಂಡ್ಯ ಜಿಲ್ಲೆಯ ಪ್ರಾತಿನಿಧಿಕ ಕತೆಗಳನ್ನು ವಿವಿಧ ಲೇಖಕರಿಂದ ಸಂಪಾದಿಸಿ 'ಕಾಡುಗಿಡಗಳು' ಎಂಬ ಶೀರ್ಷಿಕೆಯಡಿ ಪ್ರಕಟಿಸಿದ್ದಾರೆ. 'ಪುಲ್ಲೆ' (ಕಾದಂಬರಿ) ಕೂಗುತಿದೆ ಕಲ್ಲು (ದೇವರಾಗು) 'ದೊರೆಲಂಕೇಶ್ವರ' ಹಾಗೂ 'ತೆಂಡೆ' ಅಚ್ಚಿನಲ್ಲಿರುವ ಲೇಕರ ಇತರ ನಾಟಕಗಳು 'ತೆಂಡೆ' ಈಗಾಗಲೇ ರಂಗ ಪ್ರದರ್ಶನ ಕಂಡಿದೆ'.

ಇವುಗಳ ಜತೆಗೆ ಮಂಡ್ಯ ಜಿಲ್ಲೆಯ ಸಣ್ಣಕತೆಗಳು (ಲೋಕಪಾವನಿ) 'ಹತ್ತು ವರ್ಷದ ಸಣ್ಣಕತೆಗಳು' (ಸಿರಿಯೊಡಲು) ಹಾಗೂ ಮಂಡ್ಯ ಜಿಲ್ಲೆಯ ಪತ್ರಿಕೋದ್ಯಮ ಎಂಬ ವಿಮರ್ಶೆ ಲೇಖನಗಳನ್ನು. ಬರೆದಿದ್ದಾರೆ. (ತೆಂಡೆ ಕಾಂದಬರಿ ಹಾಗೂ ಸಾಕ್ಷಿ ಇವರ ಶ್ರೇಷ್ಠ ಕೃತಿಗಳು.

ರಮೇಶ್ ಹುಲ್ಲುಕೆರೆಯವರು ಅಪ್ಪಟ ಗ್ರಾಮೀಣ ಪ್ರತಿಭೆಯಾಗಿದ್ದು ಅತಿಹೆಚ್ಚು ಸರಳ ವ್ಯಕ್ತಿತ್ವ ಉಳ್ಳವರಾಗಿದ್ದರು. ಇವರು ಸಜ್ಜನ, ನಿರ್ಭೀತ, ಮಾನವತಾವಾದಿ ಅದು ಅವರ ತತ್ವ ನಿಷ್ಟ ಧೋರಣೆ, ಅವರ ರಾಜಿಗೊಪ್ಪದ ಸ್ವಭಾವ ಮೆಚ್ಚುವಂತದು. ಅಲ್ಲದೇ ಮೌಲ್ಯಾರಾಧಕರು ಹಾಗೂ ಮಾತಿನಲ್ಲಿ ಬದ್ಧತೆಯುಳ್ಳ ವ್ಯಕ್ತಿದ. ಯಾವುದೇ ಚಳುವಳಿಗೆ ಅಭಿವ್ಯಕ್ತಿ ನೀಡಿದ ಸಾಹಿತ್ಯ ಪಾತ್ರಗಳು ಸೋಲುವ ಮಾಗುವ ಸಹ್ಯವೆನಿಸುವ ಪಾತ್ರಕ್ಕೆ ಸ್ಪೂರ್ತಿ ನೀಡುವ ಶೋಧಿಸುವ ರೀತಿ ಉತ್ತಮ ಹಾಗೂ ಸಮ ಪ್ರಮಾಣದಲ್ಲಿ ಬೆಳಸಿಕೊಂಡಿದ್ದಾರೆ. ಮತ್ತು ಈ ನೆಲದ ದೇಶಿಯ ಭಾಷೆಯ ದೃಷ್ಠಿಯಿಂದ ಜಿಲ್ಲೆಯ ಪ್ರತಿಭಾವಂತ ಕಥೆಗಾರ ರಮೇಶ ಹುಲ್ಲುಕೆರೆಯವರ ವಿಷಯದಲ್ಲಿ ಬಹುಶಃ ಯಾವುದೇ ರೀತಿಯ ಅನ್ಯ ಅಭಿಪ್ರಾಯ ಬರಕೂಡದು.

ಶ್ರೀ ರಮೇಶ ಹುಲ್ಲುಕೆರೆಯವರು ತಮ್ಮ ಜೀವನದ ಕಾಲ ಘಟ್ಟದಲ್ಲಿ ಅನೇಕ ಏಳು ಬೀಳುಗಳನ್ನು ಕಂಡು ಕೊಂಡು ಸಾಹಿತ್ಯ ಕ್ಷೇತ್ರದಲ್ಲಿ ಉದಾರವಾದ ಕೃಷಿ ಮಾಡಿರುವುದು ಸಮಾಜದ ವಿಚಾರದಾರೆ.

'ಕಾಡು ಗಿಡಗಳು' (ಮಂಡ್ಯ ಜಿಲ್ಲೆಯ ಪ್ರಥಮ ಪ್ರಾತಿನಿಧಿಕ ಕಥಾ ಸಂಕಲನ)

'ತೆಂಡೆ' ಇದು ಇವರ ಶ್ರೇಷ್ಠ ಕಾದಂಬರಿ

'ಸಾಕ್ಷಿ' ಇದು ಇವರ ಶ್ರೇಷ್ಠ ಕಾದಂಬರಿ

'ಮಂಥರೆ' ಶ್ರೇಷ್ಠ ಪೌರಾವಾಣಿಕ ನಾಟಕ

ದೇವರಾಜು/ ಇವರ ಬೀದಿ ನಾಟಕ ಕೃತಿಗಳನ್ನು ರಚಿಸಿದ್ದಾರೆ. ಪ್ರಕಟವಾಗಿರುವ ಕೃತಿಗಳು ಸಹ ಇವರ ಒಡಲಲ್ಲಿ ಇರುವುದು ಮನಸ್ಸಿಗೆ ಬೇಸರ ತರುವ ವಿಚಾರವಾಗಿದೆ.

ಅಂತಹವುದರಲ್ಲಿ. ಡಕಾಯಿತರಾಣಿ ಪುತ್ಲಿ/ಕಾದಂಬರಿ ಇದು.

[ ಕನ್ನಡ ಪ್ರಭದಲ್ಲಿ ಧಾರವಾಹಿಯಾಗಿ ಪ್ರಕಟವಾದ ಕಾದಂಬರಿ]

ರಾಜಾಮಾನ್ ಸಿಂಗ್/ ಕಾದಂಬರಿ

ದೊರೆಲಂಕೇಶ್ವರ / ನಾಟಕ

ಪರಿಚಯ / ವ್ಯಕ್ತಿ ಚಿತ್ರಗಳು ಇವುಗಳಲ್ಲದೇ ಇನ್ನೂ ಅನೇಕ ರೀತಿಯ ಬರಹಗಳು ಪ್ರಕಟವಾಗಿರುವುದು.

ಸಹ ನಮಗೆ ಅಸಮಾಧಾನದ ವಿಚಾರವಾಗಿದೆ.

ಇನ್ನು ಒಂದು ಹೆಜ್ಜೆ ಮುಂದೆ ಹೋದರೇ 'ವೀಕ್ಷಕ' ವಾರ ಪತ್ರಿಕೆಯ ಪ್ರಕಾಶನದಲ್ಲಿ ಇತರ ಚಿಂತನೆಗಳು ಸಹ ನಮ್ಮ ಕಣ್ಣ ಮುಂದೆ ಸುಳದಾಡುತ್ತದೆ. ಅಲ್ಲದೆ 'ನಾವೇನೋ ಹೇಳುತ್ತಿದ್ದೇವೆ. ಎಂಬ ಮಂಡ್ಯ ಜಿಲ್ಲಾ ಪ್ರಾತಿನಿಧಿಕ ಕಥಾಸಂಕಲನವೊಂದನ್ನು ಸಂಪಾದಿಸಿದ್ದಾರೆ. ರಮೇಶ್ ಹುಲ್ಲುಕೆರೆಯವರು ತಮ್ಮ ಸಾಹಿತ್ಯ ಕ್ಷೇತ್ರದಲ್ಲಿ, ಅನಿರೀಕ್ಷಿತವಾಗಿ ಪ್ರವೇಶ ಮಾಡಿ ಆಕಸ್ಮಿಕವಾಗಿ ಮರೆಯಾದ ಒಬ್ಬ ಶ್ರೇಷ್ಠ ಬರಹಗಾರ ಎಂದರೇ ಅತಿಶಯೋಕ್ತಿಯಲ್ಲ. ಏಕೆಂದರೆ ರಮೇಶ್ ಬರೆಯುವ ಸಾಹಿತ್ಯ ಅಷ್ಟು ಗಟ್ಟಿತನದಿಂದ ಕೊಡಿದ್ದುದು ನಾವು ರಮೇಶ್ ಹುಲ್ಲುಕೆರೆ ಅವರ ಭಾಷೆ ಹಾಗೂ ದೃಷ್ಠಿಕೋನದ ಬಗ್ಗೆ ವಿಶೇಷವಾಗಿ ಮಾತನಾಡಲೇಬೇಕು. ಮಂಡ್ಯದ ಆಸುಪಾಸಿನ ಜೀವಂತ ಭಾಷೆಗೆ ಸಂಕೇತ ಹಾಗೂ ಪ್ರತಿಮೆಗಳನ್ನು ವ್ಯವಸ್ಥಿತವಾಗಿ ಸೇರಿಸುವುದರ ಮೂಲಕ ಭಾಷೆಯಲ್ಲಿ ಕಲಾತ್ಮಕತೆಯನ್ನು ಸಾಧಿಸಿದ್ದಾರೆ. ಆದ್ದರಿಂದ ಈ ಭಾಷೆಗೆ ಕಾವ್ಯದ ಧ್ವನಿಶಕ್ತಿ ಪ್ರಾಪ್ತವಾಗಿದೆ. 'ತೆಂಡೆ' ಹಾಗೂ ಸಾಕ್ಷಿ ಕೃತಿಗಳಲ್ಲಿ ಈ ಅಭಿಪ್ರಾಯಕ್ಕೆ ಸ್ಪಷ್ಟವಾದ ಸಮರ್ಥನೆ ದೊರೆಯುತ್ತದೆ.

ವಸ್ತು ಹಾಗೂ ಭಾಷೆಯ ನಿರ್ವಹಣೆ ಗಮನಿಸಿದರೆ ನವ್ಯ ಸಾಹಿತ್ಯ ಚಳುವಳಿಯ ಪ್ರಭಾವ ಇವರ ಸಾಹಿತ್ಯದ ಮೇಲೆ ಆಗಿದೆ. ಎನಿಸುತ್ತದೆ. ಆ ಪ್ರಮಾಣದಲ್ಲಿ ವಸ್ತುವಿನ ಹಾಗೂ ಭಾಷೆಯಲ್ಲಿ ಮೇಲಿಂದ ಮೇಲೆ ಸಂಕೇತ ಹಾಗೂ ಪ್ರತಿಮೆಗಳನ್ನು ಬಳಸಿ ಭಾಷೆಯನ್ನು ಅನುಕೂಲವಾಗಿ ಬಳಸಿಕೊಂಡಿರುವುದು ಕಂಡುಬರುತ್ತದೆ. ಹೀಗೆ ಉತ್ತಮ ಕೃತಿಗಳನ್ನು ಕೊಡುವುದರ ಮೂಲಕ ಶ್ರೀ ರಮೇಶ್ ಹುಲ್ಲುಕೆರೆ ಅವರ ಸಾಹಿತ್ಯ ಕೃಷಿ ಮುಂದುವರಿಯಲ್ಲೂ ಅ ಸಾಧ್ಯವಾಗಿರುವುದು ದುಃಖದ ಸಂಗತಿಯೇ ಸರಿ.

ರಮೇಶ್ ಹುಲ್ಲುಕೆರೆಯವರ ಸಾಹಿತ್ಯಕ್ಕೆ ವ್ಯಕ್ತಿತ್ವದ ಬೆಳವಣಿಗೆಗೆ ಸಮಕಾಲೀನರಲ್ಲಿದ್ದ ಕುಟುಂಬ ವರ್ಗದವರೂ ಸಹ ಸಂಪೂರ್ಣ ಸಹಕಾರ ನೀಡಿರುವುದು ಶ್ಲಾಘನೀಯ ತಮ್ಮ ಅಪೂರ್ವ ಕೃತಿಗಳ ಮೂಲಕ ನಾಡಿನ ಖ್ಯಾತ ಕಥೆಗಾರಾಗಿರುವ ರಮೇಶ್ ಹುಲ್ಲುಕೆರೆ ಅವರು. ಖ್ಯಾತ ಕಥೆಗಾರರಾದ ಡಿ.ಬೆಸಗರಹಳ್ಳಿ ರಾಮಣ್ಣನವರನ್ನು ಅತ್ಯಂತ ಸೂಕ್ಷ್ಮವಾಗಿ ಗಮನಿಸುವ ಸಂವೇದನಾಶೀಲರು ಒಂದರ್ಥದಲ್ಲಿ ಡಾ॥ಬೆಸಗರಹಳ್ಳಿ ರಾಮಣ್ಣನವರಿಗಿಂತ ಭಿನ್ನವಾಗಿ ಗ್ರಾಮೀಣ ಪರಿಸರವನ್ನು ಅರ್ಥವತ್ತಾಗಿ ಕಟ್ಟಿಕೊಟ್ಟಿರುತ್ತಾರೆಂದರೆ ಅತಿಶಯೊಕ್ತಿಯಾಗಲಾರದು.

ರಮೇಶ್ ಹುಲ್ಲುಕೆರೆಯವರು ಲೇಖಕರು ಮತ್ತು ಪತ್ರಿಕೋದ್ಯಮ ಎರಡೂ ಆಗಿರುವುದರಿಂದ ವೃತ್ತಿ ಮತ್ತು ಪ್ರವೃತ್ತಿ ನನಗೆ ಸವಾಲುಗಳಾಗಿವೆ. ಹುಟ್ಟಿದ ಪರಿಸರ ಕುರಿತು

ನನ್ನಚಗಡಕ್ಕೆ ನಾನೇ ಆಗಿ ಬರೆಯುವುದೆಂದರೆ ನನಗೆ ಬಲು ಇಷ್ಟ ಹುಟ್ಟು ಮತ್ತು ಸಾವಿನ ನಡುವೆ. ಬದುಕನ್ನು ಇಲ್ಲಿನ ಕಥೆಗಳು ಅನಾವರಣಗೊಳಸಿದೆ. ಬದುಕು ನಿಜವಾಗಿಯೂ ಕಥೆಯ ಆದರೆ ಕಥೆ ಬದಕಾಗಲಾರದು.

ನಿನ್ನನ್ನು ಕುರಿತು, ನನ್ನ ಕಥೆಗಳು ಹೇಳಬೇಕು. ನನ್ನ ಕಥೆಗಳನ್ನು ಕುರಿತು ಸಹೃದಯ ಓದುಗರು. ವಿಮರ್ಶಕರು ಹೇಳಬೇಕು. ಎಂಬುದು ಅವರ ಅಂತರಾಳದ ಮಾತಾಗಿತ್ತು.

ಈ ಬಗೆಯ ವ್ಯಕ್ತಿತ್ವದಿಂದಲೇ ನಾವು ಅವರನ್ನು ಶ್ರದ್ಧೆಯಿಂದ ಮನಃ ಪೂರ್ವಕವಾಗಿ ನೆನಪಿಸಿಕೊಳ್ಳಲು ಸಾಧ್ಯವಾಗಿರುವುದು ಮತ್ತು ಇದು ಸತ್ಯಕ್ಕೆ ಹತ್ತಿರವಾದ ಮಾತು. ಈ ಕಾರಣಕ್ಕಾಗಿ ರಮೇಶ್ ಹುಲ್ಲುಕೆರೆಯವರ ಕಥಾ ಸಾಹಿತ್ಯವನ್ನು ಪ್ರಧಾನವಾಗಿ ಹಾಗೂ ಇತರ ಬರಹಗಳನ್ನು ಸ್ಥೂಲವಾಗಿ

ಅಧ್ಯಯನ ಮಾಡಲು ಅವರ ಜೀವನ ಕ್ರಮವನ್ನು ಅರ್ಥೈಸಿಕೊಂಡು ನಂತರ ಮುಂದುವರಿಯುವುದು ಯೋಗ್ಯವಾದ ಸಮರ್ಥನೆಯಾಗಿದೆ.

ರಮೇಶ್ ಹುಲ್ಲುಕೆರೆ ಅವರ ಭಾಷೆ ಹಾಗೂ ದೃಷ್ಟಿ ಕೋನದ ಬಗ್ಗೆ ವಿಶೇಷವಾಗಿ ಮಾತನಾಡಲೇಬೇಕು. ಮಂಡ್ಯದ ಆಸುಪಾಸಿನ ಜೀವಂತ ಭಾಷೆಗೆ ಸಂಕೇತ ಹಾಗೂ ಪ್ರತಿಮೆಗಳನ್ನು ವ್ಯವಸ್ಥಿತವಾಗಿ ಸಲ್ಲಿಸುಸುವುದರ ಮೂಲಕ ಭಾಷೆಯಲ್ಲಿ ಕಲಾತ್ಮಕತೆಯನ್ನು ಸಾಧಿಸಿದ್ದಾರೆ. ಆದ್ದರಿಂದ ಈ ಭಾಷೆಗೆ ಕಾವ್ಯದ ಧ್ವನಿ ಶಕ್ತಿ ಪ್ರಾಪ್ತವಾಗಿದೆ. 'ತೆಂಡೆ' ಹಾಗೂ "ಸಾಕ್ಷಿ" ಕೃತಿಗಳಗೂ ಈ ಅಭಿಪ್ರಾಯನ್ನು ಸ್ಪಷ್ಟವಾದ ಸಮರ್ಥನೆ ದೊರೆಯುತ್ತದೆ. ವಸ್ತು ಹಾಗೂ ಭಾಷೆಯ ನಿರ್ವಹಣೆಯನ್ನು ಗಮನಿಸಿದರೆ. 'ನವ್ಯ' ಸಾಹಿತ್ಯ ಚಳುವಳಿಯ ಪ್ರಭಾವ ಇವರ ಸಾಹಿತ್ಯದ ಮೇಲೆ ಆಗಿದೆ ಎನಿಸುತ್ತದೆ. ಆಪ್ರಮಾಣದಲ್ಲಿ ವಸ್ತುವಿನ ಆಯ್ಕೆ ಹಾಗೂ ಭಾಷೆಯಲ್ಲಿ ಮೇಲಿಂದ ಮೇಲೆ ಸಂಕೇತ ಹಾಗೂ ಪ್ರತಿಮೆಗಳನ್ನು ಬೆಳಸಿ ಭಾಷೆಯನ್ನು ಅನುಕೂಲಕರವಾಗಿ ಬೆಳಸಿಕೊಂಡಿರುವುದು ಕಂಡು ಬರುತ್ತದೆ. ಹೀಗೆ ಉತ್ತಮ ಕೃತಿಗಳನ್ನರ ನೀಡಲು ಅವರ ಆಸಕ್ತರಾಗಿದ್ದರೂ ದೇವರ ಕರುಣೆಸದಿರುವುದು ವಿಷಾದಕರ ಎನಿಸುತ್ತದೆ.

**ಅಡಿ ಟಿಪ್ಪಣಿಗಳು:**

"ಅಭಿವ್ಯಕ್ತಿ ಪುಸ್ತಕ" ಸಂಪಾದಕರು (ರಾಗೌ) ರವರು

ಲೇಖನ (ಕ್ಯಾತನಹಳ್ಳಿ ರಾಮಣ್ಣ) ನವರು

ಪುಟ ಸಂಖ್ಯೆ 7 – 23

೨ ರಮೇಶರವರ ಸ್ವಂತ ಬರಹಗಳು, ರಮೇಶರವರ ಪರಿಚಯ

ಪುಟ ೧

## ಅಧ್ಯಾಯ –3

## ರಮೇಶ್ ಹುಲ್ಲುಕೆರೆಯವರ ಕಥಾ ಸಾಹಿತ್ಯಕ್ಕೆ ಪ್ರಭಾವ ಮತ್ತು ಪ್ರೇರಣೆಗಳು

ಶ್ರೀ ರಮೇಶ ಹುಲ್ಲುಕೆರೆಯವರು ಮಂಡ್ಯ ಜಿಲ್ಲೆ ಹಾಗೂ ತಾಲ್ಲೂಕಿನ ಹುಲ್ಲುಕೆರೆ ಗ್ರಾಮದಲ್ಲಿ 1947 ಮೇ 5ರಂದು ರೈತ ಕುಟುಂಬದಲ್ಲಿ ಜನಿಸಿದರು. ತಂದೆ. ಬೋಳೆಗೌಡ, ತಾಯಿ ಚಿಕ್ಕತಾಯಮ್ಮ. ಶ್ರೀಯುತರು ತಮ್ಮ ಕುಟುಂಬಿಕ ಮತ್ತು ಸಾರ್ವಜನಿಕ ಜೀವನವನ್ನು ಮಂಡ್ಯ ಜಿಲ್ಲೆಯಲ್ಲಿ ಕಳೆದಿದ್ದಾರೆ. 1977ರಿಂದ 'ವೀಕ್ಷಕ' ದಿನಪತ್ರಿಕೆಯ ಸಂಪಾದಕರಾಗಿದ್ದರು. ಸಾಹಿತ್ಯ ಕ್ಷೇತ್ರದ ಜೊತೆಗೆ ಪತ್ರಿಕಾ ಕ್ಷೇತ್ರದಲ್ಲಿಯೂ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡಿದ್ದರು. ಮೂಲತಃ ವಿಜ್ಞಾನದ ವಿದ್ಯಾರ್ಥಿಯಾಗಿದ್ದ ಇವರು ಸಾಹಿತ್ಯದ ಕೃಷಿಗೆ ತೊಡಗಿಡಸಿಕೊಂಡಿದ್ದು ಮೆಚ್ಚುತಕ್ಕ ಸಂಗತಿಯಾಗಿದೆ.

ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸುವ ಮೊದಲು ಶ್ರೀಯತರು. ಹೆಚ್.ಬಿ. ರಮೇಶ್ ಎಂಬ ವಿಜ್ಞಾನ ವಿದ್ಯಾರ್ಥಿಯಾಗಿದ್ದರು. ಇವರು ಪದವಿ ತರಗತಿಯಲ್ಲಿ (ಬಿ.ಎಸ್ಸಿ.) ವಿಜ್ಞಾನ ವಿಷಯಗಳನ್ನು ಕಲಿಯುತ್ತಿದ್ದಾಗಲೂ ಇವರಿಗೆ ಸಾಹಿತ್ಯದ ಪರಿಚಯವಿರಲಿಲ್ಲ ಸಾಹಿತ್ಯವನ್ನು ಅಭ್ಯಸಿಸುವ ಹವ್ಯಾಸ ಕೂಡ ಇರಲಿಲ್ಲ.

ಈ ರೀತಿಯಾಗಿ ಎಲೆ ಮರೆ ಕಾಯಿಯಂತಿದ್ದ ರಮೇಶ್ ಹುಲ್ಲುಕೆರೆಯವರ ವೆಕ್ತಿತ್ವ ಬಹಳ ವಿಶಾಲವಾದದು. ಕನ್ನಡಕ್ಕೆ ಇಂತಹ ವಕ್ತಲಭಿಸಿದ್ದು ಅದೃಷ್ಟವೇ ಸರಿ. ಇವರು ಇಷ್ಟೋದು ಒಳ್ಳೆಯ ಬರಹರ ಹೇಗಾದರು? ಎಂಬ ಕೂತುಹಲವನ್ನು ಬೆನ್ನು ಹತ್ತಿ ಹೋಗುವುದಾದರೇ ಅವರ ಆಪ್ತ ಸ್ನೇಹಿತರಾದ ಕ್ಯಾತನಹಳ್ಳಿ ರಾಮಣ್ಣ ಬೆಸರಗರಳ್ಳಿ ರಾಮಣ್ಣ. ಲಿಂಗಣ್ಣ ಬಂಧೂಕಾರ್. ಜಿ.ಟಿ ವೀರಪ್ಪ. ಇವರ ಇನ್ನು ಮುಂತಾದ ಸ್ನೇಹಿತ ಬಳಗ ನಮಗೆ ವಿಚಾರವನ್ನು ವಿವರಿಸುತ್ತದೆ. ಇವುಗಳು ಅಷ್ಟೇ ಅಲ್ಲದೆ ಇವರ ಬರಹಗಳು ಶಕ್ತಿಯುತವಾಗಿವೆ. ಎಂಬುದಕ್ಕೆ ಅವರ ಸ್ವತಃ ರಚನೆ ಮಾಡಿರುವ ಕೃತಿಗಳೂ ಕಾದಂಬರಿಗಳೇ ಸಾಕ್ಷಿಯಾಗಿ ನಿಲ್ಲುತ್ತವೆ. ಇವರ ಬರಹಗಳು ನಮ್ಮ ಕಣ್ಣ ಮುಂದೆ ಸುಳದಾಡುತ್ತವೆ.

ರಮೇಶ ಹುಲ್ಲುಕೆರೆಯವರಿಗೆ ಕನ್ನಡದ ಅನೇಕ ನವೋದಯ ನವ್ಯ ಕವಿಗಳು ಪ್ರಭಾವ ಬೀರಿದ್ದಾರೆ. ಅವರ ಬರವಣಿಗೆಗೆ ಸಮಯೋಚನೆವಾಗಿ ಪ್ರೇರಕರಾಗಿ ನಿಂತು ಸುಸ್ಪಷ್ಟ ಸಾಹಿತ್ಯ ರಚನೆಯಾಗಲು ಸಾಧ್ಯವಾಗಿದೆ. ತೇಜಸ್ವಿ. ಕುವೆಂಪು, ಇನ್ನು ಅನೇಕ ಮಹನೀಯರ ಪ್ರಭಾವ ಆಗಿರುವುದನ್ನು ನಾವು ನೋಡಬಹುದು.

೧೯೬೭ನೆಯ ಇಸವಿ. ಮೈಸೂರಿನ, ಮಹಾರಾಜ ಕಾಲೇಜಿನಲ್ಲಿ ಹಾಸ್ಟೇಲ್‌ನ ಹಿಂಭಾಗದ ರಸ್ತೆಯಲ್ಲಿ ಶಾರದಾದೇವಿ ವಿದ್ಯಾರ್ಥಿನಿಲಯ ಎಂಬ ಹಾಸ್ಟೆಲ್ ಗ್ರಾಮೀಣ ಒಕ್ಕಲಿಗ

ವಿದ್ಯಾರ್ಥಿಗಳಿಗೆಂದು ಒಕ್ಕಲಿಗ ಬಂಧುಗಳೂ ನಡೆಸುತಿದ್ದ ಹಾಸ್ಟೆಲ್‌ನಲ್ಲಿ ಹುಲ್ಲುಕೆರೆಯವರು ರಮೇಶನಾಗಿ ಇದ್ದರು. ಇವರ ಜೊತೆಯಲ್ಲಿಯೇ ಸಾಹಿತ್ಯದ ವಿದ್ಯಾರ್ಥಿಯಾಗಿದ್ದ ಕ್ಯಾತನಹಳ್ಳಿ ರಾಮಣ್ಣನವರು ಅಲ್ಲಿಯೇ ಇದ್ದರು. ರಮೇಶ್‌ರವರು ಜೆ.ಎಸ್.ಎಸ್ ಕಾಲೇಜಿನಲ್ಲಿ ವಿಜ್ಞಾನ ವಿದ್ಯಾರ್ಥಿಯಾಗಿದ್ದರು. ಇವರ ಜೊತೆಯಲ್ಲಿಯೇ ಕ್ಯಾತನಹಳ್ಳಿ ರಾಮಣ್ಣನವರು ಇದ್ದರು. ಹೀಗೆ ಇನ್ನೊಬ್ಬರು ಇವರ ಜೊತೆಯಲ್ಲಿಯೇ ಇದ್ದರು. ಇದು ಕೇವಲ ಆಕಸ್ಮಿಕ. ರಮೇಶ್ ಹುಲ್ಲುಕೆರೆಯವರು ಸಾಹಿತಿ ಆಗಬೇಕು. ಎಂಬುದೇ ವಿಧಿಯ ಲೆಕ್ಕಚಾರವಿರಬೇಕು. ಅದಕ್ಕಾಗಿ ಕ್ಯಾತನಹಳ್ಳಿ ರಾಮಣ್ಣನವರನ್ನು ಪರಿಚಯ ಮಾಡಿಸಿದ್ದರು ಎಂದು ಕಾಣಿಸುತ್ತದೆ.

ಹುಲ್ಲುಕೆರೆಯವರು. ಸಾಹಿತ್ಯ ಪ್ರವೇಶ ಮಾಡಲು ರಾಮಣ್ಣನವರ ಪಾತ್ರ. ಮರೆಯಲಾಗದ್ದು. ಒಂದೇ ಕೊಠಡಿಯಲ್ಲಿ ವಾಸಮಾಡಲು ತೊಡಗಿದ ಮೇಲೆ ಪರಿಚಯವಾಗಿ ಸ್ನೇಹವಾಗಿ ಸ್ನೇಹ ಪ್ರೀತಿಯಾಗಿ ಪ್ರೀತಿಯಲ್ಲಿ ಆತ್ಮೀಯತೆ ಬೆರತು. ರಾಮಣ್ಣ ಮತ್ತು ರಮೇಶ್‌ರವರ ನಡುವೆ ಒಂದು ಬಗ್ಗೆಲು. ಅವಿನಾಭಾವ ಸಂಬಂಧ ಬೆಳೆದು ಹೋಗಿ ಅವರಿಬ್ಬರು ಒಬ್ಬರನ್ನೊಬ್ಬರು ಬಿಡದ ಹಾಗೇ ಸ್ನೇಹವಾಯಿತು. ಸ್ನೇಹದಲ್ಲಿ ಏಕವಚನ ಪ್ರಯೋಗವಾಗವ ಹಾಗೇ ಸ್ನೇಹ ಬಹುಬೇಗ ಸ್ಥಾನ ಪಡೆದುಕೊಂಡಿತು.

ಧಾರವಾಡದಿಂದ ಹೊರಡುತ್ತಿದ್ದ 'ಸಂಕ್ರಮಣ' ಎಂಬ ಸಾಹಿತ್ಯ ಪತ್ರಿಕೆಯು ಆಗ ಬಹಳಸದ್ದು ಮಾಡುತಿತ್ತು. ಈ ಒಂದು ಪತ್ರಿಕೆಯು ಸಾಹಿತ್ಯ ರಚನೆಯಾಗಲು ಪರ್ವಕಾಲ ಎನ್ನುವಂತೆ ಬಹಳ ಮನರಂಜನಾತ್ಮಕವಾದ ಸಾಹಿತ್ಯತ್ಮಕವಾದ ಬರಹಗಳಿಂದ ಪ್ರೇರಿತರಾದ ಅನೇಕ ಕಲಾವಿದರು ಈ ಪತ್ರಿಕೇ ಚಂದಾದಾರಗಿದ್ದಂತೆ ರಾಮಣ್ಣನವರು. ಆ ಪತ್ರಿಕೆಗೆ ಚಂದಾದಾರರಾಗಿದ್ದರು. ಆ ಪತ್ರಿಕೆ ನಿಯಮವಾಗಿ ಅಂಚೆಯಲ್ಲಿ ಬರುತಿತ್ತು. ರಾಮಣ್ಣನವರು ಅದನ್ನು ಪ್ರತಿದಿನ ತಪ್ಪದೇ ಅಭ್ಯಾಸ ಮಾಡುತ್ತಿದ್ದರು. ಅದನ್ನು ಮಾತ್ರ ಯಾವತ್ತೂ ಸಹ. ತಿರುಗಿಯೂ ನೋಡುತ್ತಿರಲಿಲ್ಲ ಮುಟ್ಟತ್ತಿರಲಿಲ್ಲ ಆಕಸ್ಮತಾಗಿ ಬಲವಂತದಿಂದ ರಾಮಣ್ಣನವರು ಓದಲು ಕೊಟ್ಟರೆ ಕೆಲವೇ ನಿಮಿಷಗಳಲ್ಲಿ ತಿರುವಿಕ್ಕಿ ವಾಪಸುಮಾಡುತ್ತಿದ್ದರು. ಇದರಿಂದಲೇ ಗೊತ್ತುಗುತ್ತವೆ. ಸಾಹಿತ್ಯದ ಬಗ್ಗೆ ಅಷ್ಟೋನೂ ಆಸಕ್ತಿ ಇರಲಿಲ್ಲ ಎಂಬುದು.

ಒಂದು ಸಲ ಸಂಕ್ರಮಣ ಪತ್ರಿಕೆಯಲ್ಲಿ ಪ್ರೋ ಸುಧಾಕರ್ ಅವರ ಒಂದು ಕತೆ ಪ್ರಕಟವಾಯಿತು. ಅದು ಯಾವ ಕತೆಯೆಂದು ಸ್ಪಷ್ಟವಾಗಿ ತಿಳಿಯಲಿಲ್ಲವಾದರೂ ನೆನಪಿನ ಮೇಲೆ 'ಗರಿಕೆ ಬೇರು' ಎಂದು ಹೇಳಬಹುದು ಎಂದಿದ್ದಾರೆ. ಆ ಕತೆಯನ್ನು ರಾಮಣ್ಣನವರು ವಿವರವಾಗಿ ಆಭ್ಯಾಸ ಮಾಡಿದ ನಂತರ ಅವರಿಗೆ ವಿಚಿತ್ರ ಅನುಭವವಾಗುತ್ತವೆ. ಈ ವಿಚಾರವನ್ನು ಶ್ರೀ ರಮೇಶ್ ಹುಲ್ಲುಕೆರೆಯವರಿಗೆ ನೋಡೋ ರಮೇಶ್ ಇದನ್ನು ಓದು ಎಂದು ಹೇಳುತ್ತಾರೆ. ಆಗ ಅದನ್ನು (ಸ್ನೇಹಿತ ಕೊಟ್ಟ ಎಂದು ಓದಿದರೋ ಏನೋ) ರಮೇಶ್‌ರವರು ಓದುತ್ತಾರೆ. ಮಾರನೇಯ ದಿನ

ಅದನ್ನು ಹಿಂದಕ್ಕೆ ಕೊಡುತ್ತಾ ಈ ಕತೇಲಿ ಏನು ಆದೆ ಅಂತ ನನ್ನ ಕೈಲಿ ಓದಿಸಿದೆ. ಮಾರಾಯ ಎಂದು ಬೇಸತ್ತು ಹೇಳುತ್ತಾರೆ. ತಾತ್ಸಾರವಾಗಿ ವಾಪಸ್ಸು ಮಾಡುತ್ತಾರೆ. ಲೋ ರಮೇಶ ಸರಿಯಾಗಿ ಓದಿನೋಡೋ ಅಲ್ಲ ಮನಸ್ಸಿಗೆ ಉಲ್ಲಾಸ ನೀಡುವ ಆಶ್ಲೀಲತೆಯಿಂದ ಕೂಡಿದ ಕತೆ ಇದೆ. ಎಂದು ರಾಮಣ್ಣನವರು ಹೇಳುತ್ತಾರೆ. ಅಕ್ಷಣವೇ ಮತ್ತೇ ಸಂಕ್ರಮಣವನ್ನು ಕಿತ್ತು ಕೊಂಡು ಆ ಕೂಡಲೇ ಓದುತ್ತಾರೆ. ಸ್ವಲ್ಪ ಹೊತ್ತು ಬಿಟ್ಟು ಬಂದು ರಾಮಣ್ಣನವರ ಹತ್ತಿರ ಕುಳತುಕೊಂಡು "ನಿಜಕಣೋ" ಈ ಕತೆ ತುಂಬಾ ಚೆನ್ನಾಗಿದೆ. ನಾನೂ ಇಂತಹ ಕತೆಗಳನ್ನು ಬರೀಬೇಕೋ ಅನ್ನಿಸ್ತಾ ಇದೇ ಕಣೋ ಎಂದರು ಆಕ್ಷಣದಲ್ಲಿ ಕ್ಯಾತನಹಳ್ಳಿ ರಾಮಣ್ಣವನರಿಗೆ ರಮೇಶರವರು ಹೊಸರೂಪದ ರಮೇಶನಾಗಿ ಕಾಣಿಸಿಕೊಳ್ಳುತ್ತಾರೆ.

ಈ ಘಟನೆಯ ನಂತರ ರಮೇಶ್ ಹುಲ್ಲುಕೆರೆಯವರು ನಡವಳಕೆಯೇ ಬದಲಾವಣೆ ಆಗುತ್ತದೆ. ಸಾಹಿತ್ಯ ಆಸಕ್ತಿ ಬೆಳಸಿದರು. ಎಂಬ ವಿಶ್ವಾಸದಿಂದಲೇ ಏನೋ ರಮೇಶ್‌ರವರು ವ್ಯಾಘ್ರನಾಗುವುದನ್ನು ಮರೆತು ಹೋಗಿದ್ದರು. ಅಷ್ಠರ ಮೆಟ್ಟಿಗೆ ಸಾಹಿತ್ಯವು ಅವರನ್ನು ಒಳಹೊಕ್ಕಿ ಅವರ ವ್ಯಕ್ತಿತ್ವದ ಮೇಲೆ ಬಾರಿ ಪರಿಣಾಮವನ್ನು ಉಂಟು ಮಾಡಿತು. ಜೊತೆಗೆ ಸಾಹಿತ್ಯದ ಅಭ್ಯಾಸವನ್ನು ಬೆಳೆಸಿಕೊಂಡು ಅವರ ಪ್ರೇರಕರಾದ ನವ್ಯ ಸಾಹಿತ್ಯದ ತೇಜಸ್ಸಿಯವರ ಪ್ರಭಾವವೂ ಅವರ ಮೇಲೆ ಆಗಿದೆ ಎಂಬುದನ್ನು ರಮೇಶ್ ಹುಲ್ಲುಕೆರೆಯವರ ಸಾಹಿತ್ಯದ ರಚನೆಯಲ್ಲಿ ತಿಳಯಬಹುದು. ಜೊತೆಗೆ ಲಂಕೇಶರರವರ ಕಾದಂಬರಿಗಳು ಕುವೆಂಪುರವರ ವೈಚಾನಿಕ ಪ್ರಜ್ಞೆ ಎಲ್ಲವೂ ಹುಲ್ಲುಕೆರೆಯವರ ಮೇಲೆ ಪ್ರಭಾವ ಬೀರುತ್ತವೆ.

ತೇಜಸ್ವಿಯವರ ಹೊಸ ದಿಗಂತದ ಕಡೆಗೆ ಎಂಬ ವಿಚಾರ ಧಾರೆಯಲ್ಲಿ ಲೋಹಿಯಾರವರ ತತ್ತ್ವ ಚಿಂತನೆ ಕುವೆಂಪುರವರ ಕಲಾ ಸೃಷ್ಠಿ ಕಾರಂತರ ಜೀವನ ದೃಷ್ಠಿ ಮತ್ತು ಬದುಕಿನಲ್ಲಿ ಪ್ರಯೋಗ ಶೀಲತೆ ಈ ಮೂರು ಪರಿಣಾಮ ಬೀರಿರುವುದು ರಮೇಶ ಹುಲ್ಲುಕೆರೆಯವರಿಗೆ ಆಭ್ಯಾಸದಿಂದ ತಿಳಯುತ್ತದೆ. ಅವರ ಈ ಮುಂದಾಲೋಚನಾ ಶಕ್ತಿಯಿಂದಲೇ ಕನ್ನಡ ಸಾಹಿತ್ಯ ಸೃಷ್ಠಿಯಲ್ಲಿ ಈ ಚೈತನ್ಯಗಳು ಶಕ್ತಿಯಾಗಿ ನಿಲ್ಲುತ್ತದೆ. ಎಂಬ ಮಾತ್ತು ಬಹುಶಃ ನವ್ಯಕಲಾವಿದರಿಗೆ ಸ್ಪೂರ್ತಿಯಾಗಿತ್ತು ತೇಜಸ್ವಿಯವರು ತಾವು ಹೇಳ ಕೊಂಡಿರುವಂತೆ ನನ್ನ ಜೀವನವನ್ನು ವಿಧಾನವನ್ನು ಗ್ರಹಿಸುವ ಕ್ರಮವನ್ನು ಆಲೋಚನೆವನ್ನು ಅಭಿವ್ಯಕ್ತಿ ವಿಧಾನವನ್ನು ಒಟ್ಟಿನಲ್ಲಿ ಇಡೀ ಸಮಗ್ರ ವ್ಯಕ್ತಿತ್ವವನ್ನು ಸಂಪೂರ್ಣ ಒದಲಿಸಿ ಹಾಕಿದ್ದು ಲೋಹಿಯಾರವರ ತತ್ವ ಚಿಂತನೆ ಹಾಗೆಯೇ ಇವೆಲ್ಲವನ್ನು ಗಮನಿಸಿ ಅಭ್ಯಾಸಿದ ರಮೇಶ್‌ರವರು ಇದರಿಂದ ಪಕ್ವತೆಯನ್ನು ಪಡೆದುಕೊಂಡು ನವ್ಯ ಸಾಹಿತ್ಯ ಕೃಷಿ ಆರಂಭಿಸಿದರು. ಇವುಗಳಲ್ಲದೆ. ಕುವೆಂಪುರವರ ಆಧುನಿಕತೆಯ ಆರಾಧನೆಯು ಪರಂಪರೆಯ ಬಗೆಗಿನ ನಿರಾಕರಣೆಯಾಗುವ ಆತಂಕವು ಕುವೆಂಪು ಅವರಿಗೆದೆ. ಕುವೆಂಪುರವರ ಮಂತ್ರದಲ್ಲಿ 3 ಪದಗಳೂ ನಿರಂಕುಶ ಸ್ವತಂತ್ರ್ಯ. ಮತ್ತು

ಸಂಕೇತಿಕವಾದವು. ಅಂಕುಶವಿರುವ ಬಂಧನಗಳಿರುವ ಹಾಗೂ ಮುಚ್ಚುಲ್ಪಟ್ಟಿರುವ ಸಮಾಜದ ಬಗೆಗೆ ಇರುವ ತಾತ್ವಿಕ ಆಕ್ರೋಶವನ್ನು ಸೂಚಿಸುತ್ತದೆ. ಆಧುನಿಕತೆ ವೈಚಾರಿಕತೆ, ವೈಜಾನಿಕತೆಗಳನ್ನು ಕುವೆಂಪು ಮನುಕುಲದ ಬಿಡುಗಡೆಯ ಏಕೈಕಹಾದಿ ಎಂಬಂತೆ ಲೇಖನಗಳನ್ನು ಮಂಡಿಸುತ್ತಾ ಆಧುನಿಕತೆಯ ಆರಾಧನೆಯು ಪರಂಪರೆಯ ಬಗೆಗಿನ ನಿರಾಕರಣೆಯಾಗುವ ಆತಂಕವೂ ಕುವೆಂಪು ಅವರಿಗಿದೆ. ಪರಂಪರೆ ಎಂದರೇ ಸಂಕುಚಿತ ಸಂಪ್ರದಾಯವಲ್ಲ. ಆ ವರ್ತಮಾನಕ್ಕೆ ಶಕ್ತಿ ಪ್ರಧಾನ ಮಾಡುವ ಗತದ ವೇಶ ಎಂಬ ವ್ಯತ್ಯಾಸ ಅವರಿಗೆ ಸೃಷ್ಟವಾಗಿದೆ. ಆಧುನಿಕ ಮತ್ತು ಪರಂಪರೆಯನ್ನು ಸಮತೋಲನದಲ್ಲಿ ಸಾಗಿಸುವ ಎಚ್ಚರ ಇಲ್ಲವೆ.

ಈ ಎಲ್ಲಾ ಅಂಶಗಳ ಜೊತೆಗೆ ಲಂಕೇಶ್‌ರವರ ನವೋದಯ ಅಥವಾ ಬಂಡಾಯ ಸಾಹಿತ್ಯ ಮೀಮಾಂಶಕರಂತೆ ಸೈದ್ಧಾಂತಿಕ ಸೃಷ್ಟತೆಯಲ್ಲಿ ಕರೆಗೊಡುವುದಿಲ್ಲ ಒಂದು ರೂಪಕತೆಯಲ್ಲಿನ ಮೂಲಕ ತನಗಿನ್ನು ಸೃಷ್ಟವಾದ್ದನ್ನು ಸ್ಪಷ್ಟಪಡಿಸಿಕೊಳ್ಳುವಂತೆ ಹೇಳಲು ಯತ್ನಿಸುತ್ತಾರೆ. ಹೀಗಾಗಿ ಹೇಳುವಿಕೆಯಲ್ಲಿ ಒಂದು ಬಗೆಯ ಉದ್ದೇಶ ಪೂರ್ವಕ ಅಸ್ಪಷ್ಟತೆ ಉಳಿದುಕೊಂಡಿದೆ. ಇಲ್ಲಿ ಸಿದ್ಧಾಂತ ಖಚಿತತೆ ಪಾಂಡಿತ್ಯ ವಾಗಾಡಂಬರ ದೊಡ್ಡ ಮಾತು ಇತ್ಯಾದಿಗಳ ಬಗ್ಗೆ ಗಾಢ ಅನುಮಾನ ಹಾಗೂ ವಿರೋಧ ಬದಲಾಗಿ ಬರಹದಲ್ಲಿರುವ ಮೌನ ನಿಗೂಢತೆ ಸೂಕ್ಷ್ಮತೆ ದಿಗ್ಭ್ರಮೆ ಬರೆಹಕ್ಕೆ ಅಳಲು ಬಗ್ಗೆ ಹೆಚ್ಚು ಪ್ರಸ್ಥಾಪವಿದೆ ಇಂತಹ ಮಹಾನ್ ಲೇಖಕರ ಬರವಣಿಗೆಯಿಂದ ಪ್ರಭಾವಿತರಾದ ರಮೇಶ್‌ರವರ ಪ್ರೊ ಸುಧಾಕರ ಎಂಬುವವರ ಕತೆಯನ್ನು ಓದಿ. "ನಾನೂ ಬರೆಯಬೇಕು" ಎಂದು ಕೂಂಡ ರಮೇಶ್‌ರವರು ಅಪೇಕ್ಷೆಯನ್ನು ಅಷ್ಟು ಗಂಭೀರವಾಗಿ ತೆಗೆದು ಕೊಂಡಿದ್ದಾನೆಂದು ರಾಮಣ್ಣನವರಿಗೆ ತಿಳಿದದ್ದು ಅವನೊಂದು ಕತೆ ಪತ್ರಿಕೆಯಲ್ಲಿ ಪ್ರಕಟವಾದಗಾಲೇ ಹೆಚ್.ಬಿ ರಮೇಶ ಎಂಬ ವಿಜ್ಞಾನ ವಿದ್ಯಾರ್ಥಿಯು ರಮೇಶ್ ಹುಲ್ಲುಕೆರೆ ಎಂಬ ಕತೆಗಾರನಾಗಿ ಕಾಣಿಸಿಕೊಂಡಾಗ ನನಗೆ ರೋಮಾಂಚನಕ್ಕೆ ಕಾರಣವಾಗುವಷ್ಟು ಸಂತೋಷವಾಗುತ್ತಿತ್ತು. ರಮೇಶ್‌ನಿಗೇ ಬಹುಶಃ ಅಷ್ಟೇ ಸಂತೋಷವಾಗಿದ್ದಂಥ ಕ್ಷಣ ಅದು ಅ ಸಂತೋಷದಲ್ಲಿ ರಮೇಶ ಹೇಳಿದ್ದು ಬರಯೇಕೆ ಕಾರಣನೀನೆ ಆಗಿರೊಂಧ್ರಿಂದ ನನ್ನ ಕಥಾ ಸಂಕಲನ ಏನಾದರು ಪ್ರಕಟವಾದರೇ ಅದನ್ನು ನಿನಗೆ ಅರ್ಪಣೆ ಮಾಡ್ತೀನಿ ಕಣೋ ಎಂಬ ಮಾತು ಬಹಳ ವರ್ಷಗಳವರೆಗೆ ಮರೆಗೆ ಸರಿದಿತ್ತು ಎಂಬ ಮಾತನ್ನು ರಾಮಣ್ಣನವರು ಹೇಳಿ ಕೊಂಡಿದ್ದಾರೆ.

ಆದರೆ ಮುಂದೊಂದು ದಿನ ರಮೇಶ್‌ನ "ಸಾಕ್ಷಿ" ಕಥಾಸಂಕಲನ ಪ್ರಕಟವಾದಾಗ ರಾಮಣ್ಣನವರಿಗೆ ಅಚ್ಚರಿಯೇ ಕಾದಿತ್ತು. ರಾಮಣ್ಣನವರು ಆಡಿದ ಮಾತನ್ನು ರಮೇಶ ಅದೆಷ್ಟೋ ವರ್ಷಗಳು ಕಳೆದ ಮೇಲೂ ಮರೆಯದೆ "ಸಾಕ್ಷಿಯನ್ನು" ರಮೇಶರವರು ರಾಮಣ್ಣನವರಿಗೆ

ಮಾಡಿದ್ದರು. ಅ ಕ್ಷಣದಿಂದ ರಮೇಶರವರು ವಿಶಿಷ್ಠ ಸ್ಥಾನದಲ್ಲಿ ವಿಶಿಷ್ಠ ರೂಪದಲ್ಲಿ ರಾಮಣ್ಣನವರಿಗೆ ಕಾಣಿಸ ತೊಡಗಿದ್ದರು.

ರಮೇಶರವರು ವಿದ್ಯಾರ್ಥಿ ದೆಸೆಯಲ್ಲಿದ್ದಾಗೆ ಪತ್ರಿಕೋದ್ಯಮದ ಬಗ್ಗೆ ಆಕರ್ಷಿತರಾಗಿದ್ದರು. ಆ ಪೇಪರ್‌ಲ್ಲಿ ಹಾಗಿದೆ.ಈಗಿದೆ ಈ ಪೇಪರ್‌ನಲ್ಲಿ ಈಗೇ ಇರಬಾರದು ಎಂಬ ಅನೇಕ ರೀತಿಯ ಏಳು ಬೀಳುಗಳು ಹಾಗೂ ಸಮಾಜದ ಒಳತು ಕೆಡುಕುಗಳನ್ನು ಪ್ರಶ್ನಿಸುವ ಹಾಗೂ ಹೀಗೆ ಇರಬೇಕಿತ್ತು ಯಾಕೆ ಈ ರೀತಿ ಸಮಾಜವು ದುರಾವಸ್ಥೆಗೆ ಹೊಯ್ತು. ಎಂಬ ನಾನಾ ಹೇಳಕೆಗಳನ್ನು ಮತ್ತು ಹೋರಾಟ ಮಾಡುವ ವಿರೋಧಿಸುವ ಹಕ್ಕುಗಳನ್ನ ಬೆಳಸಿಕೊಂಡರು. ಸರಿ ತಪ್ಪುಗಳನ್ನು ವಿರೋಧಿಸುವ ಗುಣಗಳನ್ನು ಬಳಸಿಕೊಂಡರು. ಪದವಿ ಮುಗಿದ ಕೊಡಲೇ ರಮೇಶ್‌ರವರು ಮಾಡಿದ ಮೊದಲ ಪ್ರಯತ್ನ ಎಂದರೆ 'ವೀಕ್ಷಕ ವಾರ ಪತ್ರಿಕೆ ಎಂಬುದನ್ನು ಹುಟ್ಟು ಹಾಕಿದರು.' ಮಂಡ್ಯ ಜಿಲ್ಲೆಯ 'ವೀಕ್ಷಕ' ಮೊದಲ ದಿನ ಪತ್ರಿಕೆಯಾಗಿ ಪ್ರಕಟವಾಗುತ್ತದೆ. 'ಸಾಕ್ಷಿ' ಎಂಬ ಕಥಾ ಸಂಕಲನವು ಪ್ರಕಟವಾದ ಮೇಲೆ ರಮೇಶ್‌ರವರು ಸಾಹಿತ್ಯದ ಕೃಷಿಯನ್ನು ಗಂಭೀರವಾಗಿ ತೆಗೆದುಕೊಂಡಿದ್ದಾರೆಂಬುದು ಗೊತ್ತಾದ ಮೇಲೆ 'ಸಾಕ್ಷಿ' ಮತ್ತು 'ತೆಂಡೆ' ಕಾದಂಬರಿಯನ್ನು ಓದಿದ ಮೇಲೆ ಹಲವಾರು ಲೇಖಕರು ಇವರ ಲೇಖನಗಳನ್ನು ಅಭ್ಯಾಸ ಮಾಡಿ ಸ್ಪೂರ್ತಿಯಿಂದಾಗಿ ಇನ್ನು ಅನೇಕ ಲೇಖನಗಳು. ನಾಟಕಗಳು ಹೊರ ಬಂದವು ಮಂಥರೆ ಲಂಕೇಶ್ ಎಂಬ ನಾಟಕಗಳನ್ನು ಬರೆದು ರಾಮಾಯಣ ಪಾತ್ರಗಳನ್ನು ತನ್ನದೇ ಆದ ವಿಶಿಷ್ಠ ದೃಷ್ಠಿಕೋನದಲ್ಲಿ ಹಿಡಿದಿಟದ್ದು ಸಹೃದಯದ ಮನಸ್ಸನ್ನು ಗೆಲ್ಲುವಂತಹ ಸ್ತ್ರೀ ಪಾತ್ರಗಳನ್ನು ರಾಮಾಯಣದಲ್ಲಿ ಕುವೆಂಪುರವರು ಗರುತಿಸಿರುವಂತೆ ರಮೇಶ್‌ರವರು ಸಹ ಗುರುತಿಸಿ ಸ್ತೀ ಪಾತ್ರಗಳೀಗೆ ಜೀವ ತುಂಬಿ ಹೇಳದ್ದಾರೆ. ಮತ್ತು ಅವರ ಬರವಣಿಗೆ ಪ್ರಫುಲ್ಲತೆ ಪಡೆದು ಯಶ್ವಸಿಯಾಗಿವೆ.

ರಮೇಶ್ ಹುಲ್ಲುಕೆರೆಯವರ ಕಥಾ ಸಾಹಿತ್ಯವು ಸ್ಪೂರ್ತಿ ಪಡೆಯವಲ್ಲಿ ಮತ್ತು ಅವರು ಸಾಹಿತ್ಯ ಕೃಷಿಯು ಅತವೇಗವಾಗಿ ನಿರಂತರವಾಗಿ ಸರಾಂಗವಾಗಿ ಪ್ರಭುತ್ವವುಳ್ಳ ಬರವಣಿಗೆಯು ಶ್ರೀಯುತ ಲೇಖನಗಳಲ್ಲಿ ಹೊರಬರಲು ಕಥಾ ಸ್ವರ್ಧೆಯು ಬಹಳ ಪ್ರಭಾವಕಾರಿಯಾಗಿತ್ತು. ಅ ಸ್ವರ್ಧೆಯಲ್ಲಿ ಗೆದ್ದವರೆಲ್ಲ ಪ್ರಮುಖ ಕತೆಗರರಾಗಿ ರೂಪುಗೊಳ್ಳುತ್ತಿದ್ದರು. ನಮ್ಮ ರಮೇಶ್ ಹುಲ್ಲುಕೆರೆಯವರು ಸಹ ಎರಡು ಸಲ ದೀಪಾವಳ ಸ್ವರ್ಧೆಯಲ್ಲಿ ಪ್ರಶಸ್ತಿ ಗೆದ್ದಿರುವುದು ಗಮನಾರ್ಹ ವಿಚಾರ. ಇದರಿಂದಲ್ಲೇ ಏನೇ ಗೊತ್ತಿಲ್ಲ ಪ್ರಭಾವದಿಂದಲೇ ಬರವಣಿಗೆಗೆ ಸ್ಪೂರ್ತಿಯಾಗಿದೆ. ಒಮ್ಮೆ ರಮೇಶರು ತನ್ನ "ವೀಕ್ಷಕ" ವಾರಪತ್ರಿಕೆಯಲ್ಲಿ ಧಾರವಾಹಿ ಕಾದಂಬರಿಯೊಂದನ್ನು ಬರೆಯ ತೊಡಗಿದರು. ಅದರ ಹೆಸರು. "ಕಲ್ಲು ಮಲೆ" ಸಾಹಿತ್ಯದ ಪೂರ್ಣ ಪ್ರಜ್ಞೆ ಎದ್ದು ಕಾಣುತಿತ್ತು. ಕವಿತ್ವದ ಲಕ್ಷಣ ಇಲ್ಲಿಯು ಗೋಚರವಾಗಿತ್ತು. ಶ್ರೀಯವರ ಬರವಣಿಗೆಯ ಸಂದರ್ಭದಲ್ಲಿ ಅನೇಕ ಏಳು ಬೀಳುಗಳನ್ನು ಕಂಡದ್ದು ಉಂಟು. ಒಮ್ಮೆ ಕಲ್ಲು ಮಲೆ ಕಾದಂಬರಿಯನ್ನು

ವೀಕ್ಷಕದಲ್ಲಿ ಪ್ರಕಟವಾಗುವಂತೆ ಹುಲ್ಲುಕೆರೆಯವರು ಸಿದ್ಧತೆ ಮಾಡಿದ್ದರು. ಇದನ್ನು ಪ್ರತಿದಿನ ಬರೆಯುತ್ತಿದ್ದ ಓದುತಿದ್ದ ಕ್ಯಾತನಹಳ್ಳಿ ರಾಮಣ್ಣರವರು ಮತ್ತು ಸ್ನೇಹಿತರು ಒಂದು ಸಂದೇಶ ನೀಡಿದ್ದರು. "ಲೋ ರಮೇಶ ಕಲ್ಲುಮಲೆಯ ಕಲ್ಪನೆಯೇ ಆದ್ಭುತವಾಗಿವೆ."

ಅದನ್ನೊಂದು ಪರಿಣಾಮಕಾರಿ ಕೃತಿಯನ್ನಾಗಿ ನೀನು ರೂಪಿಸಬೇಕು ಸುಮ್ಮನೆ ಕಾಟಚಾರಕ್ಕೆ ಬರಿಬೇಡ" ಎಂದು ಚುರುಕಾಗಿ ಹೇಳಿದರು. ರಾಮಣ್ಣ ಆಗ ಅವರಿಗೆ ಏನ್ನಿಸಿತೋ ಕಾಣೇ ಕೂಡಲೇ ಧಾರವಾಹಿ ನಿಂತು ಹೋಯಿತು. ಒಂದು ಒಳ್ಳೆಯ , ಕಾದಂಬರಿ ಬರುತ್ತದೆ ಎಂದು ಕ್ಯಾತನಹಳ್ಳಿ ರಾಮಣ್ಣನವರು ಕಾದು ಕುಳಿತ್ತಿದ್ದರು. ಅದರೇ ಅದು ನೆರವೇರಲಿಲ್ಲ.

ಆದರೇ ರಮೇಶಹುಲ್ಲುಕೆರೆಯವರು ಪತ್ರಿಕೋದ್ಯಮದಲ್ಲಿ ಕೆಲಸ ಮಾಡುತ್ತಿರುವ ಫಲವಾಗಿ ವಾರಪತ್ರಿಕೆಗೆ ಸರ್ಕಾರಿ ಜಾಹೀರಾತುಗಳು ಸಿಗುವುದಿಲ್ಲ ಎಂಬ ವಿಚಾರ ತಿಳಿದು "ವೀಕ್ಷಕ' ವನ್ನು ದಿನಪತ್ರಿಕೆಯನ್ನಾಗಿಸಿ ಪರಿವರ್ತಿಸಲು ಅಗತ್ಯತಾಂತ್ರಿಕ ಕಾರ್ಯಗಳಲ್ಲಿ ತೊಡಗಿಕೊಂಡುದ್ದರಿಂದ "ಕಲ್ಲು ಮಲೆ" ಪೂರ್ಣರೂಪದಲ್ಲಿ ಸಿದ್ಧವಾಗಲು ಸಾಧ್ಯವಾಗಲಿಲ್ಲ.

ಇಲ್ಲಿಯವರೆಗೆ ಗಮನಸಿದ ಎಲ್ಲಾ ಅಂಶಗಳ ವಿಚಾರಗಳೂ ಸಹ ಶ್ರೀಯುತ್ತರ ಸಾಹಿತ್ಯದ ಪ್ರವೇಶ ಹೇಗಾಯಿತು. ಎಂಬುದು ಹಾಗೂ ಅವರಿಗೆ ಪ್ರೇರಣೆ ಆದ ವಿಚಾರ ಧಾರೆಯನ್ನು ನಾವು ಕೂಲಂಕುಶವಾಗಿ ಪರಿಶೀಲಿಸಲಾಗಿದೆ. ಇಲ್ಲಿ ಅನೇಕ ಏಳು ಬೀಳುಗಳನ್ನು ಕಂಡ ಉದಯೋನ್ಮುಖ ಲೇಖಕರು ಎನಿಸಿಕೊಂಡ ಹುಲ್ಲುಕೆರೆಯವರು ಶಕ್ತ ಲೇಖರು ಎನಿಸಿಕೊಳ್ಳುವಲ್ಲಿ ಸಫಲರಾಗಿದ್ದಾರೆ. ಎಲ್ಲಿಯೂ ಸಹ ಸಾಹಿತ್ಯದ ಕ್ರಮಕ್ಕೆ ಚ್ಯುತಿ ಬರದೇ ಬಹಳ ನಿಯಮವಾಗಿ ರಚನೆಮಾಡಿ ಸತ್ವ ಪೂರ್ಣವಾದ ಸಾಹಿತ್ಯದ ರಚನೆಗೆ ಪಾಲು ನೀಡಿದ್ದಾರೆ. ಇದರಿಂದಾಗಿ ಇವರನ್ನು ನಿಸ್ಸಂದೇಹವಾಗಿ ಕನ್ನಡದ ಒಬ್ಬ ಶಕ್ತ ಲೇಖಕರು, ಕತೆಗಾರರು ಎಂಬುದನ್ನು ಸಹ ಮತದಿಂದ ಒಪ್ಪಿಕೊಳ್ಳಬಹುದು.

**ಮೂಲತ** :- ಇವರು ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸುವ ಮುಂಚೆ ಎಚ್.ಬಿ.ರಮೇಶ್ ಎಂಬ ವಿಜ್ಞಾನ ವಿದ್ಯಾಥಿಯಾಗಿದ್ದರು. ಅವರು ಪದವಿ ತರಗತಿಯಲ್ಲಿ ವಿಜ್ಞಾನ ವಿಷಯಗಳನ್ನು ಕಲಿಯುತ್ತಿದ್ದಾಗಲೂ ಅವರಿಗೆ ಸಾಹಿತ್ಯದ ಪರಿಚಯ ಇರಲಿಲ್ಲ ಸಾಹಿತ್ಯವನ್ನು ಓದುವ ಹವ್ಯಾಸವೂ ಕೂಡ ಇರಲಿಲ್ಲ.

ಮಂಡ್ಯ ಜಿಲ್ಲೆಯ ಆಧುನಿಕ ಸಾಹಿತ್ಯ ಕ್ಷೇತ್ರದಲ್ಲಿ ರಮೇಶ ಹುಲ್ಲುಕೆರೆಯವರ ಹೆಸರು ಗಮನಾರ್ಹವಾದುದು.

**ಅಡಿ ಟಿಪ್ಪಣಿ:**

"ಅಭಿವ್ಯಕ್ತಿ ಪುಸ್ತಕ" ಸಂಪಾದಕರು (ರಾಗೌ) ರವರು

ಲೇಖನ (ಕ್ಯಾತನಹಳ್ಳಿ ರಾಮಣ್ಣ) ನವರು

ಪುಟ ಸಂಖ್ಯೆ ೧೭-೨೩

ಸಾಕ್ಷಿ, ತಂಡೆ ಕೃತಿಗಳ ವಿಚಾರಧಾರೆ. ಲೇಖಕರು ರಮೇಶ ಹುಲ್ಲುಕೆರೆಯವರು

# ಅಧ್ಯಾಯ – 4

## ರಮೇಶ ಹುಲ್ಲುಕೆರೆ ಅವರ ಕಾದಂಬರಿಗಳು:

ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ಕಳೆದ ಇಪ್ಪತ್ತೈದು ವರ್ಷಗಳಲ್ಲಿ ನಡೆದಿರುವ ಕೃಷಿಯನ್ನು ನಿರುಕಿಸುವಾಗ ಸಂತೋಷ-ದುಃಖ ಎರಡೂ ಪ್ರಸ್ತುತವೆನಿಸುತ್ತದೆ. ಈ ಅವಧಿಯಲ್ಲಿ ಸುಮಾರು ನೂರ ಐವತ್ತುಕ್ಕೂ ಹೆಚ್ಚು ಮಂದಿ ಲೇಖಕರು ಸುಮಾರು ಸಾವಿರದ ಇನ್ನೂರಕ್ಕಿಂತಲೂ ಹೆಚ್ಚು ಕಾದಂಬರಿಗಳನ್ನು ಸೃಷ್ಟಿಸಿದ್ದಾರೆ.

ನಮ್ಮ ಪುಸ್ತಕಗಳನ್ನು ಪ್ರಕಟಿಸುವವರು ಸಿಗುತ್ತಾರೆ ಎಂಬ ಭಂಡ ಧೈರ್ಯದಿಂಧ ಚಲನಚಿತ್ರಗಳಲ್ಲಿ, ಪತ್ರಿಕೆಗಳಲ್ಲಿ ಯಾರಿಂದಲೋ ಕೇಳದ, ಎಲ್ಲಿಂದಲೋ ಕದ್ದ ತಲೆ-ಬುಡವಿಲ್ಲದೇ ರಚನೆ ಆಗಿರುವ ಕಥೆಗಳನ್ನು ಗಮನಿಸಿದರೆ ಬೇಂದ್ರೆಯವರ "ಮುವತ್ತಮೂರು ಕೋಟಿ" ಕವನ ನೆನಪಿಗೆ ಬರುತ್ತದೆ. ಯಾವನೇ ಲೇಖಕ ಏಕ ಕಾಲದಲ್ಲಿ ಇಷ್ಟೆಲ್ಲಾ ಸಾಹಿತ್ಯವನ್ನು ಅಭ್ಯಾಸ ಮಾಡುವುದು ಆಗದ ಮಾತು. ಅದಕ್ಕೆ ತಕ್ಕ ಸಮಯವೂ ಇರುವುದಿಲ್ಲ, ಅನುಕೂಲವೂ ಇರುವುದಿಲ್ಲ, ಅಗತ್ಯವೂ ಇರುವುದಿಲ್ಲ.

ಕನ್ನಡ ಕಾದಂಬರಿ ಲೋಕದ ಎತ್ತರ-ಬಿತ್ತರಗಳನ್ನು, ಹಾಸು-ಬೀಸುಗಳನ್ನು ಶ್ರದ್ಧಾಪೂರ್ವಕವಾಗಿ, ಕಲಾತ್ಮಕವಾಗಿ ಉಬ್ಬಾಮಟ್ಟಕ್ಕೆ ವಿಸ್ತರಿಸಿ ಇತರ ಸಮಕಾಲೀನ ಭಾರತೀಯ ಸಾಹಿತ್ಯಕ್ಕೆ ಈ ಪ್ರಕಾರಕ್ಕೆ ಹೆಗಲೆಣೆಯಾಗಿ ಮೆರೆಸಿದವರಲ್ಲಿ ಪ್ರಾತಃಸ್ಮರಣೀಯವಾದ ಹೆಸರು ಕನ್ನಡಿಗರದು.

ಕನ್ನಡದ ಕಾದಂಬರಿಗಳು ಮತ್ತು ಸಂಖ್ಯೆಯಲ್ಲಿ ದೊಡ್ಡದಾದರು ಗುಣ ಮೌಲ್ಯ ಆಗಿವೆ. ವಿಶಾಲವೂ ವೈವಿಧ್ಯಭರಿತವೂ ಆದ ಲೋಕಾನುಭವ, ಜೀವನಾನುಭವಗಳು ಕನ್ನಡ ಕೃತಿಗಳಲ್ಲಿ ಮಡುಗಟ್ಟಿವೆ. ಕನ್ನಡದ ಕೃತಿಗಳಲ್ಲಿ ಯಾವುದೇ ಕಾದಂಬರಿಗಳನ್ನು ತೆರೆದರೂ ವ್ಯಾಪಕವೂ, ಸಾಂದ್ರವೂ, ಸಂಕೀರ್ಣವೂ ಆದ ಬದುಕು ತನ್ನ ನೂರು ಮುಖಗಳಲ್ಲಿ ಗಾನ ಗಂಭೀರವಾಗಿ, ಸಹಜರಮ್ಯವಾಗಿ, ಕುತೂಹಲಕಾರಿಯಾಗಿ ತೆರೆದುಕೊಳ್ಳುತ್ತಾ ಹೋಗುತ್ತದೆ. ಅನುಭವದ ಗಟ್ಟಿತನ, ಆರ್ದ್ರವಾದ ಆತ್ಮೀಯತೆ ಪ್ರಕಾರವು, ಪರಿಣಾಮಕಾರಿಯು ಆದ ವೈಚಾರಿಕತೆ, ಸಮಸ್ಯೆಗಳ ಶ್ರದ್ಧಾಪೂರ್ವಕವಾದ ಅಭ್ಯಾಸ, ತಾಯ್ನೆಲದ ತಂಪು, ಜೀವಂತ ಪಾತ್ರ ನಿರ್ಮಾಣ, ಕಣ್ಣ್ ಕಟ್ಟುವ ಪರಿಸರ ದೃಷ್ಟಿ, ಪ್ರಮಾಣಿಕತೆ, ಕಲೆಗಾರಿಕೆ ಇವು ಕಾದಂಬರಿಗಳ ಲಕ್ಷಣಗಳು.

ಭೂತ, ಸಂಗೀತ, ಸಾಹಿತ್ಯ, ಯಕ್ಷಗಾನ, ಸಮಾಜ ಸುಧಾರಣೆ, ಶಿಕ್ಷಣ, ರಾಜಕೀಯ, ಕೃಷಿ, ವ್ಯಾಪಾರ, ವಿಜ್ಞಾನ, ರೂಢಿ, ಮೌಢ್ಯ, ಡಂಬಾಚಾರ, ದೈವಶ್ರದ್ಧೆ, ಪ್ರಣಯ, ವಾತ್ಸಲ್ಯ, ಸಮಾಜವಾದ, ಆಷಾಢಭೂತಿತನ, ಕಪಟ ಸ್ವಾರ್ಥ ಹೀಗೆ ಬಾಳಿನ ಅನಂತ ಮುಖಗಳನ್ನು ತಬ್ಬಿ

ನಿಂತ ವಸ್ತು ಸಮುದಾಯ ಕನ್ನಡ ಕೃತಿಗಳ ಸಂಪತ್ತು. ಚಿತ್ರಿತವಾಗಿರುವ ಬದುಕಿನ ಅಂಗುಲ ಅಂಗುಲದಲ್ಲೂ ಓದುಗ ಸಕ್ರೀಯವಾಗಿ ಭಾಗವಹಿಸಿದಂತಹ ದಟ್ಟವಾದ ಅನುಭವ ಪರಿಣಾಮವನ್ನುಂಟ್ಟು ಮಾಡುವ ಹಿರಿಯ ಗುಣ ಕನ್ನಡದ ಕಾದಂಬರಿಗಳಲ್ಲಿದೆ. ಉದಾಹರಣೆಗೆ ನೋಡುವುದಾದರೆ ಕಾರಂತರ "ಮರಳಿ ಮಣ್ಣಿಗೆ, ಬೆಟ್ಟದ ಜೀವ, ಚೋಮನದುಡಿ, ಮೂಕಜ್ಜಿಯ ಕನಸುಗಳು" ಹೀಗೆ ಇನ್ನೂ ಅನೇಕ ಕೃತಿಗಳು ಕನ್ನಡ ಸಾರಸ್ವತ ಲೋಕವನ್ನು ಹಿಮ್ಮಡಿಗೊಳಸಿದೆ. ಕ್ರಾಂತಿಕಾರಕವಾದ ರೀತಿಯಲ್ಲಿ ಸಮಾಜದ ಕೊಂಕು-ಡೊಂಕುಗಳನ್ನು, ಅನ್ಯಾಯ-ಅನಾಚಾರಗಳನ್ನು ಅಸಹನೆ-ಅಸಹಮತೆಗಳನ್ನು ಟೀಕಿಸಿ, ವಿಡಂಬಿಸಿ ಕೃತಿ ರಚನೆ ಮಾಡಿರುವುದು ಕನ್ನಡ ಸಾಹಿತಿಗಳ ಒಂದು ಪ್ರತಿಮ ಕೌಶಲ.

ಜೀವನದ ಬಹು ವಿಸ್ತಾರವಾದ ನೆಲೆಗಟ್ಟಿನ ಮೇಲೆ ನಿಂತ ಬೃಹತ್ ಕಾದಂಬರಿ ವಿನಾಯಕರ "ಸಮರಸವೇ ಜೀವನ" ೧೯೩೧ ರಲ್ಲಿ ಪ್ರಾರಂಭವಾದ ರಚನೆ ೧೯೫೩ ರಲ್ಲಿ ಪೂರ್ಣಗೊಂಡಿದೆ. ಈ ಮಧ್ಯೆದ ಇಪ್ಪತ್ತೆರಡು ವರ್ಷಗಳ ಅಂತರ ಗುಣಾವಗುಣಗಳನ್ನು ಒಟ್ಟಿಗೆ ಅದಕ್ಕೆ ತಂದುಕೊಟ್ಟಿದೆ. ಎರಡು ಕುಟುಂಬಗಳ ವಿರಸ ಘರ್ಷಣೆಗಳನ್ನು ಕೇಂದ್ರವಾಗಿಟ್ಟುಕೊಂಡು ಆರಂಭವಾದ ಕೃತಿ ಬಹುಬೇಗನೆ ತನ್ನ ಕ್ಷೇತ್ರವನ್ನು ವಿಸ್ತಾರವಾಗಿರಿಸಿಕೊಂಡು ವ್ಯಾಪಕವಾಗಿ ಪ್ರಾದೇಶಿಕವಾಗಿ, ರಾಷ್ಟ್ರೀಯವಾಗಿ, ಅಂತರಾಷ್ಟ್ರೀಯವಾಗಿ ಬೆಳೆಯುತ್ತದೆ. ವಿನೋದ, ವಿಚಾರ, ತರ್ಕ, ತತ್ವ, ಧರ್ಮ, ಸಂಸ್ಕೃತಿ, ಪ್ರೇಮ, ಆದರ್ಶ, ನಿಸರ್ಗ, ಶ್ರದ್ಧೆ, ಸಂಪ್ರದಾಯ, ಶಿಕ್ಷಣ, ಸಂಸ್ಕಾರ ಮುಂತಾದ ಹಲವು ಹನ್ನೊಂದು ವಿಚಾರಗಳು ಇದರಲ್ಲಿ ಮೇಳವಿಸಿವೆ. ಹಲವು ಪಾತ್ರಗಳು ತುಂಬಾ ಸದೃಢವಾಗಿ, ಸಬಲವಾಗಿ ಮೂಡಿ ಬಂದಿದ್ದರೆ, ಕೆಲವು ನಿಷ್ಕಾರಣವಾಗಿ ಮೊಟಕುಗೊಂಡಿವೆ. ಹಲವೆಡೆ ಆಶ್ಚರ್ಯಗೊಳಸುವಂತಹ ಅದ್ಭುತ ವಾಸ್ತವಿಕ ಚಿತ್ರಣವಿದ್ದರೆ ಮತ್ತೇ ಕೆಲವೆಡೆ ಅತಿಶಯೋಕ್ತಿ, ಅತಿವರ್ಣನೆ, ಭಾವಾತಿರೇಕ ತುಂಬಿಕೊಂಡಿವೆ. ಭಾಷಾ ಶೈಲಿಯಲ್ಲಿಯೂ ಇದೇ ರೀತಿಯ ವಿಷಮತೆ ಕಣ್ಣಿಗೆ ಬಡಿಯುತ್ತದೆ. ಆಡು ನುಡಿ ತತ್‌ಕ್ಷಣ ಗ್ರಾಂಥಿಕವಾಗುತ್ತದೆ. ಕೆಲವು ಪಾತ್ರಗಳ ಬಗ್ಗೆ ಲೇಖಕರು ಪಕ್ಷಪಾತ ವಹಿಸಿ ಬಿಡುವುದರಿಂದ ಉಳಿದವು ಛಾಯಪಾತ್ರಗಳಾಗಿ ಬಿಡುತ್ತವೆ. ಆದರೂ ಒಟ್ಟಾಗಿ ನೋಡುವಾಗ ಈ ದೋಷಗಳು ಪ್ರಕರವಾಗಿ ಕಾಣಿಸದೇ ಕಾದಂಬರಿಯಲ್ಲಿ ಜೀವಂತವಾಗಿ ಉಸಿರಾಡುವ ಅದ್ಭುತವಾದ, ರಮ್ಯವೂ ಆದ ಬದುಕು ನಮ್ಮ ಮನಸ್ಸನ್ನು ತುಂಬುತ್ತದೆ. ಉತ್ತರ ಕರ್ನಾಟಕದ ಜನ ಜೀವನ ತನ್ನೆಲ್ಲಾ ಸಮಗ್ರತೆಯೊಡನೆ, ಸಂಕೀರ್ಣತೆಯೊಡನೆ ಇಲ್ಲಿ ಮೈವೆತ್ತಿದೆ. ಕಥಾ ಪಾತ್ರಗಳು, ಘಟನೆಗಳೂ, ವಿಚಾರಗಳೂ ಇಲ್ಲಿ ಇಣುಕಿರದಿದ್ದರೆ ಅವೆಲ್ಲಾ ಬಹುಮಟ್ಟಿಗೆ ಸಮರಸಗೊಂಡು, ಸಮನ್ವಯಗೊಂಡು ಒಮ್ಮುಖವಾಗಿ ನಡೆದು ಕಾದಂಬರಿಯ ಮಹಾಸೌಧವನ್ನು ನಿರ್ಮಿಸಿವೆ.

"ಕಾನೂರು ಹೆಗ್ಗಡತಿ"ಯನ್ನು ಬರೆದ ಕುವೆಂಪು ಇತ್ತೀಚೆಗೆ "ಮಲೆಗಳಲ್ಲಿ ಮದುಮಗಳು" ಕಾದಂಬರಿಯನ್ನು ಸೃಷ್ಟಿಸಿದ್ದಾರೆ. ಗಾತ್ರ-ಪಾತ್ರಗಳೆರಡರಲ್ಲೂ ಇದು ನಿಸ್ಸಂದೇಹವಾಗಿ ದೊಡ್ಡದು.

ನಾಡಿನ ಮಹಾಬಿತ್ತಿಯ ಮೇಲೆ ರೂಪಗೊಂಡಿರುವ ಈ ಕೃತಿ "ಹುಲಿಯ ತೆರೆದ ಹಾದಿಯಲ್ಲಿ
ಅಂತರಂಗದ ಎಳೆ ಎಳೆಯನ್ನು ನಿಷ್ಕಪಟವಾಗಿ, ಸಾಹಸ ರಮ್ಯವಾಗಿ, ಸಾಂದ್ರವಾಗಿ ಬಿಡಿ
ಸಿ ಪ್ರದರ್ಶಿಸುತ್ತಾ ನಡೆಯುತ್ತದೆ. ಪ್ರಕೃತಿ ಮಡಿಲಲ್ಲಿ ಹುದುಗಿದ ನಾಲ್ಕಾರು ಹಳ್ಳಿಗಳ ವಿವಿಧ
ತಿಯ, ವಿವಿಧ ವರ್ಗದ ಮನೋಧರ್ಮದ ವಿವಿಧ ಸಂಪ್ರದಾಯದ ಜನ ಜೀವನವನ್ನು ಅತೀ
ಶ್ಲಲವು, ಅನಾದೃಶ್ಯವು ಆದ ರೀತಿಯಲ್ಲಿ ನಗ್ನವಾಗಿ ಬಣ್ಣಿಸುತ್ತದೆ ಈ ಕೃತಿ". ಮದುವೆ ಇಲ್ಲಿನ
ಧಾಂಗಗಳನ್ನು ಬೆಸೆಯುತ್ತದೆ. ಇದರಲ್ಲಿ ಕಥಾ ನಾಯಕನಿಲ್ಲ, ನಾಯಕಿ ಇಲ್ಲ. ಮಲೆನಾಡಿನ
ೀ ಬದುಕಿಗೆ ಇಲ್ಲೇ ನಾಯಕಪಟ್ಟ: ಅದ್ಭುತ ವಾಸ್ತವತೆಗೆ ನಾಯಕಿಯ ಕಿರೀಟ. ಇಲ್ಲಿ
ವಸರವಿಲ್ಲ, ಅತಿಶಯೋಕ್ತಿ ಇಲ್ಲ, ಅತಿ ಪ್ರಧಾನತೆ ಇಲ್ಲ, ಅವಾಜ್ಞೆ ಇಲ್ಲ. ಎಲ್ಲವೂ ವಿಶಿಷ್ಟ,
ಲ್ಲವೂ ಪ್ರಧಾನ, ಎಲ್ಲವೂ ಸುಸ್ಪಷ್ಟ, ಕುವೆಂಪುರವರ ಪ್ರಗಾಢವಾದ ಅನನ್ಯ ಸದೃಶವಾದ ಕಾಡಿನ
ಾಡಿನ ಜೀವನಾನುಭವದ ಸೂಕ್ಷ್ಮ ಸಂವೇದನೆಗಳನ್ನು ಶಸಕ್ತವಾಗಿ ಸೆರೆ ಹಿಡಿಯಬಲ್ಲ
ಲೆಗುಂಪಿನ ವಿಧೇಯಶೈಲಿ, ಸೋಪಜ್ಞಶೀಲವಾದ ಕಲಾಪ್ರಜ್ಞೆ, ಬೌದ್ಧಿಕ ಎಚ್ಚರ ಇವುಗಳೆಲ್ಲವೂ
ಮಾಣಬದ್ಧವಾಗಿ ಸಮ್ಮಿಲನಗೊಂಡಿವೆ. ಕಥಾ ಸಂವಿದಾನದಲ್ಲಿ ವಸ್ತು ನಿರೂಪಣೆಯಲ್ಲಿ, ಪಾತ್ರ
ಚನೆಯಲ್ಲಿ, ಶೈಲಿಯಲ್ಲಿ ಹಳೆಯ ಜಾಡನ್ನು ಅಳದು ಹೊಸ ದಾರಿಯನ್ನು ತುಳದು ವಿಶಿಷ್ಟ
ಕ್ಷಣಗಳನ್ನೊಳಗೊಂಡ ಸಂಕೀರ್ಣ ಕಾದಂಬರಿ ಇದು.

ಇಷ್ಟು ವಿಚಾರವನ್ನು ಕಾದಂಬರಿಯಲ್ಲಿ ಪ್ರಸ್ತಾಪ ಮಾಡಬೇಕಾದ ಅನಿವಾರ್ಯತೆ
ಏನೆಂದರೆ ಈ ಮೇಲಿನ ಎಲ್ಲಾ ಹೇಳಿಕೆಗಳನ್ನು ಪ್ರಸ್ತಾಪಿಸಲು ನನಗೆ ಸಂತೋಷವಾಗುತ್ತದೆ.
ಕಾರಣ ಅಪ್ಪಟ ಮಂಡ್ಯ ಜಿಲ್ಲೆಯ ಗ್ರಾಮೀಣ ಪ್ರತಿಭೆ ಎನಿಸಿಕೊಂಡಿರುವ ರಮೇಶ
ಹುಲ್ಲುಕೆರೆಯವರು ಈ ಮೇಲಿನ ಎಲ್ಲಾ ಅಂಶಗಳನ್ನು ಒಳಗೊಂಡಂತೆ ಹಾಗೂ ತಮ್ಮದೇ ಆದ
ಆಡು ಭಾಷೆಯ ಮೂಲಕ ಕೃತಿ ರಚಿಸಿರುವುದು ನಮ್ಮೆಲ್ಲರ ಹೆಮ್ಮೆ ಎಂದರೆ ಅತಿಶಯೋಕ್ತಿಯಲ್ಲ.
ವಿಜ್ಞಾನ ವಿದ್ಯಾರ್ಥಿಯಾಗಿದ್ದ ಇವರು ಇಡೀ ಕನ್ನಡದ ಸೊಗಡನ್ನು ಬಹಳ ಸರಳವಾಗಿ
ಸರಳಭಾಷೆಯಲ್ಲಿ ಸಹೃದಯನಿಗೆ ಒದಗಿಸಿರುವ ಶ್ಲಾಘನೀಯ ವಿಚಾರವನ್ನು ರಮೇಶ
ಹುಲ್ಲುಕೆರೆಯವರು ಒದಗಿಸಿದ್ದಾರೆ.

ಶ್ರೀ ರಮೇಶ ಹುಲ್ಲುಕೆರೆಯವರು ತಮ್ಮ ಸಾಹಿತ್ಯ ಕೃಷಿಯ ಸಂದರ್ಭದಲ್ಲಿ ಅನೇಕ
ಅದ್ಭುತ ಕೃತಿಗಳು ಅವರ ಲೇಖನಿಯಿಂದ ಹೊರಬಂದಿವೆ. "ಎಲ್ಲವೂ ಜೊಳ್ಳಲ್ಲ, ಎಲ್ಲವೂ
ಗಟ್ಟಿಯಲ್ಲ ಎನ್ನುವ ಹಾಗೆ ಬರೆದವೆಲ್ಲಾ ಸಹೃದಯರಿಗೆ ದಕ್ಕುವ ಕಾರ್ಯ ಹುಲ್ಲುಕೆರೆಯವರ
ಸಾಹಿತ್ಯ ಬೇಸಾಯದಲ್ಲಿ ಕೈಗೂಡಲಿಲ್ಲ. ಆದರೂ ಮುಟ್ಟಿದೆಲ್ಲಾ ಚಿನ್ನ" ಎನ್ನುವ ಹಾಗೆ ಹೊರ
ಬಂದ ಬೆರಳೆಣಿಕೆಯಷ್ಟು ಕೃತಿಗಳು ಸಂಪೂರ್ಣ ಸಹೃದಯರ ಮನಸ್ಸನ್ನು ಗೆಲ್ಲುವ ಕೃತಿಗಳು
ಹೊರ ಬಂದಿವೆ. ಇಂತಹ ಕೃತಿಗಳಲ್ಲಿ ಪ್ರಮುಖವಾದ ಕಾದಂಬರಿಗಳೆಂದರೆ ತೆಂಡೆ,
ಡಕಾಯಿತರಾಣಿ ಪುತ್ಲಿ, ಕಣ್ಣಳತೆಯೊಳಗಿಂದ, ನನ್ನೊಬ್ಬನದೇ ಆತ್ಮಕಥೆಯಲ್ಲ ಎಂಬ ಅನೇಕ

ಕಾದಂಬರಿಗಳಲ್ಲಿ "ತೆಂಡೆ" ಕಾದಂಬರಿಯು ಪ್ರಕಟಿತವಾಗಿದ್ದು, ಉಳಿದವು ಅಪ್ರಕಟಿತವಾಗಿ ಉಳಿದಿರುವುದು ಕನ್ನಡ ಸಾಹಿತ್ಯ ಲೋಕಕ್ಕೆ ಅಳಿಯಲಾರದ ನಷ್ಟವಾಗಿದೆ. ಈ ವಿಚಾರವು ವಿಷಾದನೀಯ ಎಂದರೆ ಅತಿಶಯೋಕ್ತಿಯಲ್ಲ. ಪ್ರಸ್ತುತ ನಾವು ತೆಂಡೆ ಕಾದಂಬರಿಯನ್ನು ಚರ್ಚಿಸಿದಾಗ ಇದು ಹುಲ್ಲುಕೆರೆಯವರ ಮೊದಲ ಪ್ರಕಟಿತ ಕಾದಂಬರಿ. ಈ ಕಾದಂಬರಿಯ ವಸ್ತು ವಿಷಯವೆಂದರೆ ಬೋರದೇವರ ಗುಡಿಯ ಹಕ್ಕು ಹಾಗೂ ವತ್ತುವರಿ ಜಮೀನಿನ ಹಕ್ಕು ಮೂಲ ಕಾರಣವಾಗಿ ರಕ್ತ ಸಂಬಂಧಿಗಳೇ ಆದ ಕಲ್ಲುಕೆರೆ ಹಾಗೂ ದೊಡ್ಡಿಯ ಜನರ ಬದುಕು ದುರಂತದಲ್ಲಿ ಅಂತ್ಯ ಕಾಣುವುದನ್ನು ಬಹಳ ಅರ್ಥವತ್ತಾಗಿ ಈ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ. ಮೊದಲ ಭಾಗವನ್ನೇ ನಾವು ಚರ್ಚಿಸುವಾಗ ಈ ಕಾದಂಬರಿಯ ಕೇಂದ್ರ ಬಿಂದು ಪೊತ್ತೆ ಎನ್ನುವ ಪಾತ್ರ ಹಾಗೂ ಅವನ ಸುತ್ತ ಮುತ್ತಲ ಕಥೆ ತನ್ನ ತೆರೆಗಳನ್ನು ಬಿಚ್ಚಿಕೊಳ್ಳುತ್ತಾ ಹೋಗಿ ಪೊತ್ತೆಯ ಸಾವಿನೊಂದಿಗೆ ಅಂತ್ಯಗೊಳ್ಳುತ್ತದೆ.

ಚೂರು ಉಪಯೋಗಕ್ಕೆ ಬಾರದ ತೆಕ್ಕಲು ಬಿದ್ದ ಬಯಲು ಬಿಸಿಲು, ಮಳೆ, ಗಾಳಿಗೆ ಕರಿದು ಕೂರಿಸಿದಂತಿಟ್ಟ ಬಂಡೆಗಳ ನಡುವೆ ತಣಿಸಿ ಕಳ್ಳಿ, ಯಕ್ಕ, ಚುಜಲು, ಗೊಬ್ಬಳ, ಯಲಚಿ ಬೆಳೆದುಕೊಂಡು ಐದಾರು ಮೈಲಿ ಉದ್ದಗಲಕ್ಕೆ ಮೈಚಾಚಿ ಮಲಗಿತ್ತು. ನಿಶಬ್ಧವಾಗಿ ಮುನಿದೆದ್ದ ಮುಗಿಲು ದಟ್ಟವಾಗಿ ಕೌಚಿಕೊಂಡು ಕತ್ತಲು ಕಾಲೂರುತ್ತಿರುವಂತೆ ಕರಿಯ ಕಲ್ಲು ಗುಡ್ಡಗಳೆಲ್ಲಾ ದಿಕ್ಕು ದೆಸೆ ಇಲ್ಲದಂತೆ ಎಸೆದ ತಬ್ಬಲಿ ಹೆಣದಂತೆ ಭಾಸವಾಗಿ: "ಎತ್ತ ನೋಡಿದರೂ ಒಂದು ನರಪಿಳ್ಳೆಯೂ ಕಾಣಿಸದೆ ಹೆದರಿಕೆಯಿಂದ ಹೆಜ್ಜೆಯ ವೇಗ ಹೆಚ್ಚಿಸಿದ".

ಉತ್ಸಾಹ ಕಳೆದುಕೊಂಡ ಪೊತ್ತೆ ಎದೆಯ ಜೇಬನ್ನು ಅರಸಿ ತೆಗೆದ ಮೋಟು ಬೀಡಿಯನ್ನು ತುಟಿಗೆ ಸಿಕ್ಕಿಸಿ ಮತಾಪಿನಿ ಮೇಲೆ ಕಡ್ಡಿ ಗೀರುತ್ತಾ ಕೈಸುಟ್ಟುಕೊಂಡು ಬಾಯಿಗೆ ಬೆರಳು ಹಾಕಿ ಚೀಪುತ್ತಾ ಪೇರಿ ಕಿತ್ತ. ರಭಸಕ್ಕೆ ಚಡ್ಡಿ ಜೇಬಿನಲ್ಲಿದ್ದ ಖಾಲಿ ನಶ್ಯದ ಡಬ್ಬಿಯೊಡನೆ ಚಿಲ್ಲರೆ ಕಾಸು ಜಣಕ್ಕನೆ ಸದ್ದು ಮಾಡುತ್ತಿದ್ದುದನ್ನು ಅಷ್ಟು ದೂರ ಹೋದ ಮೇಲೆ ಗಮನಿಸಿ ಎದೆಯ ಜೇಬಿನಲ್ಲಿದ್ದ ಸದುಕು ಬಿದ್ದು ಹೋಗದಂತೆ ಸರಿ ಮಾಡಿಕೊಂಡು, ಉಬ್ಬಿಕೊಂಡಿದ್ದ ಜೇಬಿನ ಗಂಟನ್ನು ಕೈಯಲ್ಲಿ ಹಿಡಿದುಕೊಂಡು ಓಡತೊಡಗಿದ. ಕ್ಯಾತನ ಅಂಗಡಿಯಲ್ಲಿ ಇಪ್ಪತ್ತು ಪೈಸೆ ಕೊಟ್ಟು ತಿಂದ ಬಾಳೆಹಣ್ಣು ಬಾಯಿಗೆ ಬಂತು. ಮೆಲುಕು ಹಾಕತೊಡಗಿದ. ಇಲ್ಲಿ ಪೊತ್ತೆಯ ಅವಸ್ಥೆಯನ್ನು ನಾವು ಚರ್ಚಿಸಬೇಕಾಗುತ್ತದೆ. ಪೊತ್ತೆಯ ಚಲನೆಯನ್ನು ಹೊತ್ತಿನ ಕಣ್ಣಂಚಿನಲ್ಲಿ ಚದುರು ಹೋಗಿದ್ದ ಕಪ್ಪು ಮೋಡಗಳೆಲ್ಲಾ ಗೋರಿ ಗುಡ್ಡೆಯಾಕಿದಂತೆ. ಆಗಸದಲ್ಲಿ ಜಮಾಯಿಸಿಕೊಂಡು ಹೆಪ್ಪುಗಟ್ಟುತ್ತಿರುವ ದೃಶ್ಯವು ಪೊತ್ತೆಯ ಜೀವನ ವ್ಯವಸ್ಥೆಯನ್ನು ವಿವರಿಸುತ್ತದೆ. ಪೊತ್ತೆಯ ಪರಿಸ್ಥಿಯ ಬಗ್ಗೆ ಲೇಖಕರು ತಮ್ಮ ಭಾಷಾ ಪ್ರೌಢಿಮೆಯಿಂದಲೇ ಕಲೆ ಹಾಕಿದ್ದಾರೆ. ಇಲ್ಲಿ ಅವನ ಜೀವನ ವ್ಯವಸ್ಥೆಯು ಅಷ್ಟೆ ಪರಿಣಾಮಕಾರಿಯಾಗಿ ಅವನ ಮನಸ್ಸು

ಆತಂಕದಿಂದ ಕಾಡುತ್ತಿರುವ ದೃಶ್ಯ ಕಾಡಿನಲ್ಲಿ ವರ್ಣಿತವಾಗಿರುವುದು. ಹುಲ್ಲುಕೆರೆಯವರ ಭಾಷಾ ಪ್ರೌಢಿಮೆಯಿಂದಲೆ ಶಬ್ದ ಪ್ರಯೋಗಗಳಂದ ಕಲೆ ಹಾಕಿರುವುದು ಅದ್ಭುತ ಕಲೆ.

ಶ್ರೀಯುತರು "ಗೌಡನದೊಡ್ಡಿಯವರಿಗೆ ಇರೋ ಹಮ್ಮು ದೇಶದ ಮೇಲೆ ಯಾರಿಗೂ ಇಲ್ಲ". ಈ ರೀತಿಯ ದುರಾಹಂಕಾರ ಇರೋರು ಹುಚ್ಚೆದ್ದ ಹೊಳೆಲಿ ಕೊಚ್ಚ್‌ಕೊಂಡ್ ಹೋಗ್‌ಬಿಡ್‌ತಾರೆ. ನನಗ್ಯಾಕೆ ಇದು ಎಲ್ಲಾ ಉಪ್ಪು ತಿಂದೋರು ನೀರು ಕುಡೀಬೇಕು ಅಂದ್‌ಕೊಂಡು "ತಣಸಿ" ಎನ್ನುವ ಸ್ಥಳವನ್ನು ಪ್ರವೇಶ ಮಾಡಿ "ಕಲ್ಲುಕೆರೆ" ಸುರಗಿ ತೋಪಿಗೆ ಬರುವ ಹೊತ್ತಿಗೆ ಮತ್ತೇ ಹುಟ್ಟಿ ಬಂದ ಅನುಭವವಾಯಿತು. ಸಮಾಧಾನ ತಂದ್‌ಕೊಂಡು ಇನ್ನು ಮುಂದೆ ಜೊತೆ ಯಾರಾದ್ರು ಸಿಕ್ತಾರೆ. ಊರ್ ಹತ್ರ ಬಂತು ನನ್‌ಗ್ಯಾಕ್ ಭಯ, 'ಇದ್ರ ಮನೆ ಹಾಳಾಗ' ಮೋಡ ನೋಡಪ್ಪ ಹಾಗೆಯೆ ಕಳಚಿಕೊಂಡು ಬಿದ್ದು ಹೋಗುವ ಹಾಗೇ ಇದೆ. ಇದೇನಾದ್ರು ಊರ್ ಮೇಲ್ ಬಿದ್ರೆ ಏನ್ ಗತಿ ಎಂದೂ ಮರದ ಮರೆಯಲ್ಲಿ ನಿಲ್ಲುತ್ತಾನೆ.

ಮೂರು ತಲೆಮಾರು ಕಂಡ ಅರಳಮರ ನಾಲ್ಕಾಳು ತಬ್ಬಿದರು ತಬ್ಬಲಾಗದ ಬುಡ. ಎಣಿಸಲಾರದಷ್ಟು ಬೇರುಗಳು, ಮರಿಬೇರುಗಳು ಬೀಳಲು ಮುಂಗಾರುಮಳೆಯ ಬಿರುಗಾಳಿ ಹೊಡೆತಕ್ಕೆ ಸಿಕ್ಕಿ ತತ್ತರಿಸುವಂತಿತ್ತು. ಬಿರುಗಾಳಿ ಜಾಸ್ತಿಯಾದಂತೆಲ್ಲಾ ಪೊಟರೆ ಬಿದ್ದ ಅರಳಮರ ಸಿಡಿಲು ತಗಲಿ ಬೋಳಾಗಿ ನಿಂತ ಕೊಂಬೆಗಳು ಕಿಟಿ ಕಿಟಿ ಸದ್ದು ಮಾಡುತ್ತಾ ಪೊತ್ತೆಗೆ ದಿಗಿಲು ಹುಟ್ಟಿಸಿದವು. ಇಲ್ಲಿ ಪೊತ್ತೆಯು ಅರಳಿಮರದ ಆಶ್ರಯ ಪಡೆಯುತ್ತಾನೆ. ಆದರೆ ಅಲ್ಲಿ ಕೀಳು ಜಾತಿಯ ಭಯ ಎದ್ದು ಕಾಣುತ್ತದೆ. ಕಾರಣ ಅವನು ಅರಳಿಮರದ ಬುಡದಲ್ಲಿ ನಿಲ್ಲುತ್ತಾನೆ. ಅಲ್ಲಿ ನಿಲ್ಲಲು ಅರಳಿಕಟ್ಟೆಯನ್ನು ಹತ್ತಬೇಕು. ಆದರೆ ಆ ಊರಲ್ಲಿ ಗೌಡರ ಹತೋಟಿಯಿಂದ ಕೀಳು ಜಾತಿಯವರು ಬಹಳ ಭಯದಿಂದಲೇ ಬದುಕುತ್ತಿದ್ದು, ಇದಕ್ಕೆ ಅವನ ಭಯವೇ ಕಾರಣ. ಯಾರಾದರೂ ಕಂಡುಬಿಟ್ಟರೇ ಏನ್ ಗತಿ ಎಂಬುದು ಮನಸ್ಸಿನಲ್ಲಿ ಮನೆ ಮಾಡಿ ಸೂತಕದ ಛಾಯೆಯನ್ನು ಮೂಡಿಸಿತ್ತು.

ಮನಸ್ಸು ಮೈಯನ್ನು ತಬ್ಬಿಕೊಂಡಂತೆಲ್ಲಾ ತನ್ನ ಹುಟ್ಟು ಹೊಲೆತನದ ಬಗೆಗೆ ಜಿಗುಪ್ಸೆ ಮೂಡಿತು. "ಯಾಕಾದರೂ ನಾವು ಕೀಳು ಜಾತಿಯಲ್ಲಿ ಹುಟ್ಟುತ್ತೇವೆಯೋ ದೇವ್ರೆ" ಈ ಭೂಮಿಯ ಮೇಲೆ, ಎಂದೂ ಅವನ ಹೃದಯ ತತ್ತರಿಸಿತು.

ಮೂರು ತಲೆಮಾರು ಕಂಡ ಅರಳಮರ ಅದರ ಅಭದ್ರತೆಯ ಪೊತ್ತನೆಗೆ ತಿಳಿದು ಬಹಳ ಭಯ ಪಟ್ಟುಕೊಂಡು ಮುನ್ನೂರು ವರ್ಷಗಳ ಹಳೆಯದಾದ ಈ ಮರವು ಅಷ್ಟೇನು ಅಡಿಪಾಯವನ್ನು ಉಳಿಸಿಕೊಂಡಿಲ್ಲ ಎಂದು ತಿಳಿದು ಧೈರ್ಯದಿಂದ ರಸ್ತೆಗಿಳಿದು ನಡೆಯುತ್ತಿದ್ದಾಗ ಅಪಾಯವು ಕಾದಿತ್ತು. ಆದರೆ ಅವನಿಗೆ ಅದು ಉತ್ಸಾಹದ ಕೆಲಸವೇ ಅಗಿತ್ತು. ಅವನನ್ನು ಘಟ ಸರ್ಪವೊಂದು ಅಡ್ಡಗಟ್ಟಿತು. ಅವನಿಗೆ ಅದು ಉತ್ಸಾಹದ ಕೆಲಸವೇ ಆಗಿತ್ತು. ಅವನು ತಕ್ಷಣ ಅದನ್ನು ಹಿಡಿಯಲು ಪ್ರಸನ್ನನಾಗಿ ಎಲ್ಲಾ ರೀತಿಯ ಪ್ರಯತ್ನ ಮಾಡಲು ಮುಂದಾಗಿ ಕೊನೆಗೆ

ಅವನೇ ತಣ್ಣಗಾಗಿ ಗುರುವಿನ ಮಾತನ್ನು ನೆನಪಿಸಿಕೊಂಡು ಗುರುವಿನ ಮಾತಿನಲ್ಲಿನ ನಂಬಿಕೆ ಹಾವನ್ನು ಜೀವಂತವಾಗಿ ಉಳಿದುಕೊಳ್ಳುವಂತೆ ಮಾಡಿ ಇಲ್ಲಿ ಒಂದು ಕಡೆ ಉಳಿಯುವುದು ಮತ್ತೊಂದು ಕಡೆ ಅಳಿಯುವುದು ಕಂಡುಬರುತ್ತದೆ.

ಆದರೂ ಪೊತ್ತೆಗೆ ಮನಸ್ಸು ಮಾತ್ರ ಸಮಾಧಾನವಿಲ್ಲ. ಇಲ್ಲಿ ಅವನ ಮುಗ್ಧತೆಗೆ ಮೂಢ ನಂಬಿಕೆ ಬಹಳ ಚುರುಕಾಗಿ ಭಾಸವಾಗುತ್ತದೆ. ಮನಸ್ಸಿನಲ್ಲಿ ಬೇರೂರಿದ್ದ ಮನಸ್ಸಿನ ಮೈಲಿಗೆ ಸೂತಕದ ವಾತಾವರಣ ಮನೆ ಮಾಡಿಬಿಡುತ್ತದೆ. ನಂತರ ಮುಂದೆ ದಾರಿ ಸಾಗುತ್ತಾ ಹೋದಂತೆ ಪೊತ್ತೆಗೆ ಪಿಡ್ಡೆ ಮತ್ತು ಸಣ್ಣ ಮರಿ ಎನ್ನುವ ವ್ಯಕ್ತಿಗಳು ಭೇಟಿಯಾಗುತ್ತಾರೆ. ಇಲ್ಲಿ ಪೊತ್ತೆಗೆ ಕಾಫಿ ಆಸೆಗೆ ಸಣ್ಣ ಮರಿಯನ್ನು ಎದುರು ಹಾಕಿಕೊಳ್ಳುತ್ತಾನೆ. ಕೊನೆಗೆ ಹೊಲೆಯ ಅಂತ ಬೈಯ್ಯುತ್ತಾನೆ. ಆಗ ಅವನು ತಿರುಗಿಸಿ ಉತ್ತರ ಕೊಡುತ್ತಾನೆ. ಅಂದರೆ ಅಷ್ಟು ಹೊತ್ತಿಗಾಗಲೆ ದಲಿತ ವರ್ಗಗಳು ತಿರುಗಿ ಬೀಳುವಂತೆ ಕುವೆಂಪುರವರು ತಮ್ಮ ಕಾದಂಬರಿಗಳಾದ "ಕಾನೂರು ಸುಬ್ಬಮ್ಮ ಹೆಗ್ಗಡತಿ ಮತ್ತು ಮಲೆಗಳಲ್ಲಿ ಮದು ಮಗಳು ಹಾಗೂ ಕಾರಂತರ ಚೋಮನದುಡಿ, ದೇವನೂರರ ಒಡಲಾಳ" ಹೀಗೆ ಅನೇಕ ಕೃತಿಗಳಲ್ಲಿ ದಲಿತ ವರ್ಗಗಳ ಸಂಘರ್ಷ ಮಾರ್ಧನಿಸಿತ್ತು. ಬಹುಶಃ ಆ ಒಂದು ಸಾಹಿತ್ಯದ ಪ್ರೇರಣೆ ಹುಲ್ಲುಕೆರೆಯವರ ಸಾಹಿತ್ಯದ ಕೃಷಿಗೆ ಎಡೆ ಮಾಡಿಕೊಟ್ಟಿದೆ. ನಂತರ ಸಣ್ಣಮರಿ ಅವನನ್ನು ಹುಬ್ಬಿಸುತ್ತಾ ಪೊತ್ತೆಗೆ ಆಸೆ ತೋರಿಸಿ ಹಾಡುವಂತೆ ಹೇಳುತ್ತಾನೆ. ಇಲ್ಲಿ ಪಿಡ್ಡೆ ಮೇಲೆ ಕೋಪ ಬರುವ ಹಾಗೆ ಮಾಡುತ್ತಾನೆ. ಮತ್ತೇ ಅದೇ ಸಣ್ಣಮರಿ ಪಿಡ್ಡೆ ಮೇಲೆ ನಿಷ್ಠೂರ ಕಟ್ಟಿಕೊಳ್ಳಬಾರದಿತ್ತು ಎಂದು ಅವನಿಗೆ ಮಸಲತ್ತು ಮಾಡುತ್ತಾನೆ. ಇಲ್ಲಿ ದಲಿತ ವರ್ಗಗಳನ್ನು ಮೇಲ್ವರ್ಗದವರು ಬಳಸಿಕೊಳ್ಳುವ ರೀತಿಯನ್ನು ವಿವರಿಸಲಾಗುತ್ತದೆ. ಇಲ್ಲಿ ಪೊತ್ತೆಯ ಮುಗ್ಧತನ ಹಾಗೂ ಜಾತಿ ಎಲ್ಲವೂ ಅವನನ್ನು ಬಹಳವಾಗಿ ಕಾಡುತ್ತವೆ.

ಬಸವೇಗೌಡರ ಮನೆಯಲ್ಲಿ ಪೊತ್ತೆ ಜೀತಕ್ಕೆ ಇರುತ್ತಾನೆ. ಸ್ವಂತ ಊರಿಗೆ ಹೋಗುತ್ತಾನೆ. ನಂತರ ಬರುವ ಸಂದರ್ಭದಲ್ಲಿ ಬಹಳ ಭಯ ಇರುತ್ತದೆ. ನಂತರ ಹಳೇ ಮನೆಯಲ್ಲಿ ಬೀಡಿ ಸೇದುತ್ತಿದ್ದಾಗ ಬೆಂಕಿ ಹತ್ತಿಕೊಳ್ಳುತ್ತದೆ. ಎಲ್ಲರು ಎದೆ ಬಡಿದು ಬಂದು ನೋಡಲು ಇವನನ್ನು ಯಗ್ಗ ಮಗ್ಗ ತಳಿಸುತ್ತಾರೆ. ಕೊನೆಗೆ ಕೆಲಸದಿಂದ ವಜಾ ಮಾಡುತ್ತಿರುತ್ತಾರೆ. ಆದರೆ ಗೌಡನ ಹೆಂಡತಿಯ ಕರುಣೆಯಿಂದ ಅವನ ಕೆಲಸ ಉಳಿಯುತ್ತದೆ.

ತಿಳಿನೀಲಿಯ ಬಾಲನಲ್ಲಿ ಸಾಲು ಸಾಲಾಗಿ ಹೊರಟ ನೀರ ಹಕ್ಕಿಗಳು ಗುಂಪು ಗುಂಪಾಗಿ ಚಿಲಿ ಪಿಲಿ ಗುಟ್ಟುತ್ತಾ ಹಾಡುತ್ತಿದ್ದ ಗಿಳಿಗಳು, ಬಾವಲಿಗಳು, ಬಣ್ಣ ಬಣ್ಣದ ಬೆಡಗಿನ ಆಟ ಹಾಡುತ್ತಾ ಮುಂಜಾವ ಮಬ್ಬುಗತ್ತಲಿನಲ್ಲಿ ಬೆಳಕು ಹರಿಯುತ್ತದೆಂದು ಸಾರುತ್ತಾ ಬೋರದೇವರ ಗುಡಿಯ ಗೋಪುರದ ಕಂಚಿನ ಕಳಸದ ಮೇಲೆ ಗೋಪುರ ಅಕ್ಕ-ಪಕ್ಕ, ಮೊಗ್ಗಲಿನಲ್ಲಿ ಸ್ವಲ್ಪ ಹೊತ್ತು ತಂಗಿ ಶಿವ ಶಿವ ಎನ್ನುವಂತೆ ಕಿಚ ಕಿಚ ಗುಟ್ಟುತ್ತಾ ಇದ್ದ ದೃಶ್ಯವನ್ನು ನೋಡುತ್ತಾ ನಿಂತಿದ್ದ ಜೋಗಿಗೌಡರು ಮನದಲ್ಲೆ ಮಣಿದು ಶಿವ! ಶಿವ! ಸಕಲ ಜೀವ ಜಂತುಗಳ ಸೃಷ್ಟಿಕರ್ತ

ಅನ್ನದಾತನು ನೀನು, ನಿನ್ನ ಮಹಿಮೆ ಆಳ ಯಾರು ಬಲ್ಲಿರುತ್ತಾನೆ ಎಂಬುದಾಗಿ ಸ್ವಗತ ಹೇಳಿಕೊಳ್ಳುತ್ತಾ ಮೈಮೇಲಿನ ದುಪ್ಪಟ್ಟಿಯನ್ನು ಸರಿಪಡಿಸಿಕೊಂಡು ದೇವರಕಟ್ಟೆಯ ಬಳಿಗೆ ಬಂದವರೇ ಮೂರು ಸಾರಿ ಮುಳುಗು ಹಾಕಿ ಕೊರೆಯುವ ಚಳಿಯಲ್ಲಿ ನಡುಗುತ್ತಾ ಕಣಗಲೆ, ಕಂಚುವಾಳ, ಬಿಲ್ವಪತ್ರೆ, ಲಕ್ಕಿಸೊಪ್ಪು, ಮಲ್ಲಿಗೆಯ ಮೊಗ್ಗುಗಳನ್ನು ಬಿಡಿಸಿ ತೊಳೆದು ತಂದು ದೇವಾಲಯದ ಮುಂದಿರುವ ಧ್ವಜಸ್ತಂಬದ ದೇವರ ಪಾದಗಳಿಗೆ ಮುಡಿಸಿ ಕಣ್ಣಿಗೆ ಹೊತ್ತಿಕೊಂಡು ಮೂರು ಸುತ್ತು ನಿಂತಲ್ಲೆ ಪ್ರದಕ್ಷಿಣೆ ಹಾಕಿದರು.

ಇಲ್ಲಿ ದೊಡ್ಡಿ ಮತ್ತು ಕಲ್ಲುಕೆರೆ ಊರುಗಳ ನಡುವೆ ಬೋರದೇವರ ಗುಡಿಯು ನಮಗೂ ಹಕ್ಕಿದೆ, ಪಾಲು ಕೊಡಲಿ, ಯಜಮಾನಿಕೆ ದೊಡ್ಡಿಗೂ ಇರಲಿ ಅಂತ ಮಸಲತ್ತು ನಡೆಸುತ್ತಿದ್ದಾರಂತೆ ಎಂಬ ವಿಚಾರವನ್ನು ಸೋಮಣ್ಣ ಶುರು ಮಾಡಿದ. ಏನಂತೆ ಏನಂತೆ ಇಷ್ಟು ದಿನ ಊರ ಹಂಚ್ಕೋಳೊಕೆ ಹೊಡೆದಾಟ–ಬಡಿದಾಟ ನಡೆಯಿತು. ಈಗ ಬೋರದೇವರ ಹಂಚ್ಕೊಳೋಕೆ ಹೊರಟಿದ್ದಾರೆ ಎಂದರು ಶಿವರಾಮಣ್ಣ. ಆಗ ಸಿದ್ಧೇಗೌಡ, ಗದ್ದೇಗೌಡ, ಬಸವೇಗೌಡ, ಸುಬ್ಬೇಗೌಡ ಹೀಗೆ ಅನೇಕ ಪಾತ್ರಗಳು ಇಲ್ಲಿ ಕಾದಂಬರಿಗೆ ಜೀವ ತುಂಬಿವೆ. ಎಲ್ಲರೂ ತಮ್ಮ ಅಂತಸ್ತಿಗೆ ಹಾಗೂ ಗೌರವಕ್ಕೆ, ಧೈರ್ಯಕ್ಕೆ ಎದುರಾಗುವ ಮಾತನ್ನಾಡುತ್ತಾರೆ. "ಅವನು ಅಪ್ಪನ್ಗೆ ಹುಟ್ಟಿದ್ರೆ" ಎಂಬ ಭಾವೋದ್ವೇಗಗಳನ್ನು ವ್ಯಕ್ತಪಡಿಸುತ್ತಾರೆ.

"ಹೆಣ್ಣಿಗೆ ಹೊನ್ನಿನದೇ ಚಿಂತೆ ಆದರೆ, ರೈತರಿಗೆ ಮಣ್ಣಿನದೇ ಚಿಂತೆ" ಇಲ್ಲಿ ಭೂಮಿಯನ್ನು ಕೊಳ್ಳುವ ಆಸೆ ಎಲ್ಲರಿಗೂ ಇದೆ. ಕಲ್ಲುಕೆರೆಯ ಜನರು ಹಿಂದಿನ ಕಾಲದಲ್ಲಿ ಕಡಿಮೆ ಬಂಡವಾಳಕ್ಕೆ ಕೊಂಡು ಈಗ ಅದರಿಂದಲೇ ಕುಳವಾಗಿದ್ದಾರೆ. ದೊಡ್ಡಿಯ ಜನಕ್ಕೆ ಒಂದು ಅಂಗುಲ ಭೂಮಿಯನ್ನು ಕೊಡಬಾರದು. ಕಳೆದ ಚುನಾವಣೆಯಲ್ಲಿ ಏನೋ ಅವರ ಕೈ ಮೇಲಾದುದ್ಕೆ ಕಲ್ಲುಕೆರೆಯಲ್ಲಿ ಗಂಡಸರೇ ಇಲ್ಲ ಎಂದು ತಿಳಿದು ಬಿಟ್ಟಿದ್ದಾರೆ. ಈ ಜಮೀನು ನಮ್ಮೂರಿಗೆ ಸೇರಬೇಕು. ನಾವು ಬ್ಯಾಡ ಅಂದ್ ಮೇಲೆ ಯಾರಾದ್ರೂ ಕೊಂಡ್ಕೊಂಡ್ ಹೋಗ್ಲಿ ಎಂಬುದು ಊರಿನಲ್ಲಿ ಒಗ್ಗಟ್ಟಿಲ್ಲದೇ ಹೋದರು ಈ ವಿಚಾರದಲ್ಲಿ ಇವರ ಒಮ್ಮತವನ್ನು ನಾವು ಮೆಚ್ಚುವಂತದ್ದು. ಒಟ್ಟಾರೆಯಲ್ಲಿನ ಕಥಾ ಭಾಗದಲ್ಲಿ ಗೌಡರೆಲ್ಲರೂ ಊರಿನ ಜಾಗವನ್ನು ಯಾವುದೇ ಕಾರಣಕ್ಕೂ ಬೇರೆಯವರಿಗೆ ಬಿಟ್ಟುಕೊಡಬಾರದು ಎಂಬುದು ಸ್ಪಷ್ಟ ನಿಲುವಾಗಿತ್ತು. ಕಾದಂಬರಿಯಲ್ಲಿ ಹಾವು, ಪೊತ್ತೆ, ಬಸವೇಗೌಡ, ಅವನ ಹೆಂಡತಿ, ಊರಿನ ಜನ, ಜೀತ ಪದ್ಧತಿ, ಸ್ತ್ರೀ ಶೋಷಣೆ, ಹಂಗು–ದರ್ಪ ಮೊದಲಾದ ತೀಕ್ಷ್ಣ ವಿಷಯಗಳ ಮುಂದೆ ನಾಗರಹಾವಿನ ವಿಷ ತಂಪಾಗಿಯೆ ಕಾಣುತ್ತದೆ. ಆದ್ದರಿಂದ "ಹಂಗಿನ ಅಮೃತಕ್ಕಿಂತ ಸ್ವಂತ ವಿಷ ಲೇಸು ಎಂಬಂತೆ, ವಿಷಪೂರಿತ ಬೆರಳನ್ನು ತನ್ನ ಅಸ್ತಕ್ಕೆ ಜೋಡಿಸಿಕೊಂಡು ಸಾವನ್ನಪ್ಪುತ್ತಾನೆ.

ಎರಡನೇಯ ಭಾಗದಲ್ಲಿ ಜೋಗಿಗೌಡರು ಬೋರದೇವರ ಗುಡಿಯ ಅರ್ಚಕರು ದೇವರಿಗೆ ಪೂಜೆ ಸಲ್ಲಿಸುವ ರೀತಿ ಮಾಮೂಲಿನಂತೆ ಮಂತ್ರದ ಮೂಲಕ ನಡೆಯುತ್ತದೆ. ಎರಡು

ಊರುಗಳೂ ಸೇರಿ ಊರಿಗೆ ಊರೇ ಒಕ್ಕಲಿನಿಂದ ನಿಂತು ಮಾಡುತ್ತಿದ್ದ ಜಾತ್ರೆ ಅದ್ಭುತವಾಗಿತ್ತು. ಅವು ನಿಂತು ಹೋದ ಮೇಲೆ ಬೋರದೇವರ ಗುಡಿಯು ಪಾಳಾಗಿ ನಿಂತಿದೆ.

ಹಿರಿಯ ತಂಬಡಿಯವರು ದೇವಾಸ್ಥಾನದ ಆವರಣದಲ್ಲಿ ಪೂಜೆ ಮಾಡಿಸುವವರು ತೆಂಗಿನಕಾಯಿಗೆ ಹತ್ತು ಪೈಸೆ ಕೊಟ್ಟು ಟಿಕೇಟು ತರಬೇಕು. ದೇವರ ಹೂವು ಕೇಳುವವರಿದ್ದರೆ ಐದು ರಾಪಾಯಿ ಕೊಟ್ಟು ನಿಮ್ಮ ಹೆಸರನ್ನು ಪುಸ್ತಕದಲ್ಲಿ ಬರೆಸಬೇಕು. ಹೊಸದಾಗಿ ಮದುವೆಯಾದ ದಂಪತಿಗಳು ಬಂದಿದ್ದರೆ ದೇವರಿಗೆ ಕಾಣಿಕೆ ಹತ್ತು ರೂ. ಕೊಟ್ಟು, ಬಾಸಿಂಗ ತಂದಿದ್ದರೆ ದೊಡ್ಡ ಗಂಟೆಗೆ ಕಟ್ಟಿಸಿ ಪೂಜೆ ಮಾಡಿಸಿ, ತಲೆ ಮುಡಿ ಕೊಡುವವರಿದ್ದರೆ ಮಕ್ಕಳಿಗೆ ಐವತ್ತು ಪೈಸೆ, ದೊಡ್ಡೋರಿಗೆ ಒಂದು ರಾಪಾಯಿ ಕೊಟ್ಟು ಟಿಕೆಟ್ ತಕ್ಕೊಳ್ಳಿ. ಹರಿಕೆ ಹಣ, ಒಡವೆ, ಧನ-ಧಾನ್ಯ ಕೊಡೋರು ಪುಸ್ತಕಕ್ಕೆ ಬರೆಸಿ ರಸೀದಿ ತಕ್ಕೋಳ್‌ಬೇಕು. ಅಲ್ಲದೇ, ನೋಡಿ ಈ ಬೋರ್ಡ್‌ನಲ್ಲಿ ದಯವಿಟ್ಟು ಗಲಾಟೆ ಮಾಡ್‌ಬೇಡಿ, ಮಹಾಮಂಗಳಾರತಿಯಾಗಿದೆ. ಯಾರಿಗೂ ಪೂಜೆ ಮಾಡಿಕೊಡಲ್ಲ, ಸ್ವಲ್ಪ ಸುಮ್ನಿರಿ, ದಾರಿ ಕೊಡಿ ಎಂದು ಜೋಗಿಗೌಡ್ರು ಯಜಮಾನಿಕೆ ವಹಿಸಿದ್ರು.

ಇಲ್ಲಿ ದೇವರ ಹೆಸರಿನಲ್ಲಿ ದುಡ್ಡು ಮಾಡುವ ಕಾರ್ಯ ನಡೆಯುತ್ತಿರುತ್ತದೆ. ಇದೇ ಸಂದರ್ಭದಲ್ಲಿ ಮತ್ತೊಂದು ಅವಘಡ ನಡೆಯುತ್ತದೆ. ಪೂಜೆ ನಡೆಯುವ ಸಂದರ್ಭದಲ್ಲಿ ಚಿಕ್ಕ ಗುರುಸ್ವಾಮಿಗೆ ಒಂದು ನಂಬಲು ಅರಿಯಲಾಗದ ಧ್ವನಿ ಕೇಳಸುತ್ತದೆ.

ಯಾಕೆ ಇಷ್ಟು ಹೊತ್ತು, ನಿನ್ಗೆ ಹೊತ್ತು ಗೊತ್ತು ಏನೂ ಇಲ್ವ, ಇಷ್ಟೊತ್ತು ಏನ್ಮಾಡ್ತಿದ್ರಿ. ಸ್ವಾಮಿ ನಿಮ್ಗೆ ಹೇಳೋಕೆ ಏನು, ನಮ್ಮ ಕಷ್ಟ-ಸುಖ ಗೊತ್ತಿದ್ರೆ ತಾನೆ. ತಾಪತ್ರೆ ಯಾರಿಗಿಲ್ಲ, ಅಧ್ಕೆ ದೇವ್ರ್ ಕೆಲ್ಸ ಮಾಡಬೇಡ ಅಂತಾ ಯಾರ್ ಹೇಳದ್ರು, ನಮ್ಗೂ ದೇವರ ಕೊಡುಗೆ ಗದ್ದೆ ಕೊಡಿ, ನಿಮ್ಮಂಗೆ ಮೂರೋತ್ತು ಕೂತ್ಕೊಂಡು ತಮ್ಟೆ ಬಡೀತೀವಿ. ಹೊಟ್ಟೆ ತುಂಬೀರೋನ್ಗೆ ಈ ದೇವರು-ದೇವಸ್ಥಾನ, ನಮಗೆ ಎಲ್ಲಿದೆ ಸ್ವಾಮಿ ಸ್ಥಾನ? ಸ್ಮಶಾನಕ್ಕೆ ಹೋಗಿ ಹೊಲೆಯ ದೂರ ಇಡಿ ಅಂತಾರೆ, ಎಂದಾಗ ಮಾತು ಅದ್ಮೀರುತ್ತಿದೆ ಎಂಬ ಅರಿವು ಬಂದು ತಮ್ಮಡಿ ಗುರುಸ್ವಾಮಿ ಗರ್ಭಗುಡಿ ಹೊಕ್ಕರು. ತಮಟೆಯವರು, ಓಲಗದವರು ಸದ್ದು ಮಾಡುತ್ತಿದ್ದಂತೆಯೆ ದೇವರ ದರ್ಶನಕ್ಕಾಗಿ ಕಾದು ನಿಂತ ಜನ ನೂಕು ನುಗ್ಗಾಡಿ ಗದ್ದಲವೆಬ್ಬಿಸಿದರು.

ಇಲ್ಲಿ ತಮಟೆಯವರು ಸಮಾನತೆಯ ಧ್ವನಿ ಎತ್ತಿದರು. ಜೋಗಿಗೌಡರು ತಮಟೆ ಬಡಿಯುವವರನ್ನು ಏಕೆ ತಡವಾಯಿತು ಎಂದು ಕೇಳದಾಗ ದಲಿತರು ಮೇಲೆ ಹೇಳಿರುವ ನುಡಿಯನ್ನು ನೆನಪಿಸಿಕೊಳ್ಳಬೇಕಾಗುತ್ತದೆ. ದಲಿತರಿಗೂ ಕೂಡ ಹಕ್ಕನ್ನು ಚಲಾಯಿಸುವ ಸಮಯ ಬಂದಿದೆ ಎಂಬುದನ್ನು ಶ್ರೀಯುತರು ಈ ಮಾತಿನ ಮೂಲಕ ವ್ಯಕ್ತಪಡಿಸಿದ್ದಾರೆ. ಇಲ್ಲಿನ ಪೂಜೆ, ಅಸಹಾಯಕ ಜನರು, ವರವನ್ನು ಬೇಡುವುದು, ದೇವರು ವರವನ್ನು ನೀಡದಿರುವುದು,

ಜೋಗಿಗಳು ಈ ದಿನ ದೇವರು ಕೋಪಿಸಿಕೊಂಡಿದ್ದಾನೆ ಅಂತ ಹೇಳುವುದು ಎಲ್ಲವೂ ಸಹ ಮುಗ್ಧತನಕ್ಕೆ, ಮೂಢತನಕ್ಕೆ ನೀಡಿದ ಕನ್ನಡಿಯಂತೆ ಇತ್ತು.

ಇತ್ತ ಕಡೆ ಬಸವೇಗೌಡರು ದೊಡ್ಡಿ ಜನಕ್ಕೆ ಬುದ್ಧಿ ಕಲಿಸಲು ಕಾದು ಕುಳಿತ್ತಿದ್ದಾರೆ. ಬಸವೇಗೌಡರ ಮನೆಯಿಂದ ಪೂಜೆಗೆ ಪೊತ್ತೆ ಗಾಡಿ ಕಟ್ಟಿಕೊಂಡು ದೇವಸ್ಥಾನಕ್ಕೆ ಬರುತ್ತಾರೆ. ಪೊತ್ತೆ ಗಾಡಿ ಕಟ್ಟಿಕೊಂಡು ಬರುತ್ತಾನೆ. ಪೊತ್ತೆ ಗಾಡಿ ನಿಲ್ಲಿಸಿ ತೀರ್ಥದ ಗುಂಡಿ ಹತ್ತಿರ ಹೋಗುತ್ತಾನೆ. ತೀರ್ಥದ ಗುಂಡಿ ಬೋರದೇವರಷ್ಟೆ ಪವಿತ್ರವಾದ, ಪ್ರಸಿದ್ಧವಾದ ಸ್ಥಳ. ಗರ್ಭಗುಡಿಯಲ್ಲಿ ತಳೆದ ನೀರು ಹೊರ ಬರಲೆಂದು ಬಿಟ್ಟ ಈ ಸ್ಥಳ ಹಬ್ಬ-ಹರಿದಿನಗಳಲ್ಲಿ ಪೂಜಿಸಲ್ಪಡುತ್ತಿತ್ತು. ಬಿಡುದಿನಗಳಲ್ಲಿ ಹೈಕಳ ಆಟದ ಗುಂಡಿಯಾಗಿತ್ತು.

ತೀರ್ಥದ ಗುಂಡಿಯ ಸುತ್ತ ಪಡ್ಡೆ ಹೈಕಳ ಈಜುವುದು, ನೆಗೆಯುವುದು, ಹಾಗೆ ನಿಂತು ಒಬ್ಬರಿಗೊಬ್ಬರು ತಾಮುಂದು ತಾಮುಂದು ಎಂದು ಕಚ್ಚಾಡುವ ದೃಶ್ಯ ಕಣ್ಣೆದುರಿಗಿತ್ತು. ಗುರುಸ್ವಾಮಿ ಮಗುವೊಂದಕ್ಕೆ ಬೆಲ್ಲದ ಅರಕೆಯನ್ನು ತೆಗೆಯುತ್ತಿದ್ದರು. ಮಗುವಿನ ಎತ್ತರಕ್ಕೆ ಬೆಲ್ಲದ ಹಚ್ಚುಗಳನ್ನು ಒಂದರ ಮೇಲೆ ಒಂದರಂತೆ ಜೋಡಿಸಿ ಹಿಡಿದುಕೊಂಡು ತೀರ್ಥದ ಗುಂಡಿಗೆ ಪೂಜೆ ಮಾಡಿದ ನಂತರ ಮಗುವಿನ ಮೇಲೆ ತೀರ್ಥ ಎಸೆದು ಇಳ ತೆಗೆದು ಬೆಲ್ಲದ ಗುಂಡಿಗೆ ಹಾಕುತ್ತಿದ್ದನು. ಬೆಲ್ಲ ಎಸೆಯುವಾಗ ಹುಡುಗರು ನುಕು ನುಗ್ಗಲಾರಂಭಿಸಿ ಗೋರಿಕೊಳ್ಳುವುದಕ್ಕಾಗಿ ಭಾರಿ ಹೋರಾಟವನ್ನೇ ಮಾಡಬೇಕಾಯಿತು.

ಗದ್ದಲ, ನೂಕು-ನುಗ್ಗಲು, ಗುಡಿಯ ಬಾಗಿಲಿನಲ್ಲಿ ಸಾಲು ಸಾಲಾಗಿ ನಿಂತ ಭಿಕ್ಷುಕರು, ನವಿಲುಗರಿ ಕಂತೆ ಹಿಡಿದು ಜಾಗಟೆ ಭಾರಿಸುತ್ತಾ ಗೋವಿಂದ ಗೋವಿಂದ ಎಂದು ಅರಚ್ಚುತ್ತಾ ದಾಸಯ್ಯಗಳು ಹೋಗಿ ಬರುವವರ ತಲೆಯ ಮೇಲೆ ನವಿಲುಗರಿ ಕಂತೆಯಿಂದ ಸವರುತ್ತಾ ನೆನೆಸಿದ್ದು ಕೈಗೂಡೊ ತಂದೆ, ನಿನ್ನ ಭಕ್ತರ ಮನೆ ಬಂಗಾರವಾಗಲೊ ಎಂದು ಶಂಖ-ಜಾಗಟೆ ಬಾರಿಸುತ್ತಾ ಭೂಮಿ-ಆಕಾಶಗಳು ಒಂದೂಗೂಡಿಸುತ್ತಿದ್ದರು. ಮತ್ತೊಂದು ಕಡೆ ಈ ಕಾದಂಬರಿಯಲ್ಲಿ ಪ್ರೇಮಿಗಳ ಪರಿಚಯವೂ ಆಗುತ್ತದೆ. ನುಕು-ನುಗ್ಗಲಿನಲ್ಲಿ ಹಿಂದೆ ಉಳಿದ ನವೀನ ದಾಸಯ್ಯನನ್ನೆ ಕುತೂಹಲದಿಂದ ಗಮನಿಸಿದಳು. ನವ ದಂಪತಿಗಳು ಅತ್ತ ಬಂದರು. ದಾಸಯ್ಯ ನವಿಲುಗರಿಯನ್ನು ಅವರ ತಲೆ ಮೇಲಿಟ್ಟು ಭೈರುವ ನಿನ್ನ ನಂಬಿದ ಮನೆ ದೀಪ ಬಾಡದಿರಲಿ, ಈ ಬಂಗಾರದ ಒಡಲಲ್ಲಿ ಸೂರ್ಯ ಚಂದ್ರರು ಹುಟ್ಟಲೊ ಎಂದು ಶಂಖ ಊದಿ ಜಾಗಟೆ ಬಾರಿಸಿದರು. ದಂಪತಿಗಳು ಒಂದು ರೂಪಾಯಿ ಹಾಕಿ ಮುಂದೆ ಹೊರಟರು. ಅನಂತನಿಗೆ ಇದೇನೂ ಹೊಸದಲ್ಲ. ಬಾಲ್ಯದಿಂದಲೂ ಕಂಡಿದ್ದ. ಇಲ್ಲಿ ತೀರ್ಥದ ಗುಂಡಿಯ ಹತ್ತಿರ ಕಲ್ಲುಕೆರೆ ಮತ್ತು ದೊಡ್ಡಿಯ ಮಕ್ಕಳು ಸೇರಿದ್ದರು. ಇಲ್ಲಿ ಪೊತ್ತೆ ಊರಿನ ಶತೃತ್ವವನ್ನು ಮರೆತು ಎಲ್ಲಾ ಮಕ್ಕಳನ್ನು ಸೇರಿಸಿ ಆಟವಾಡಿದನು.

ಗುರುಸ್ವಾಮಿಯವರು ಗೌಡರಿಗೆ ಹೊಲೆಯರೂ ಆಡಿದ ನುಡಿಗಳನ್ನು ಮುಟ್ಟಿಸಲು ಪ್ರಾರಂಭಿಸಿದಾಗ ಆ ಊರಿನ ಮೇಲೆ ಇಟ್ಟಿದ್ದ ಅಭಿಮಾನವನ್ನು ವ್ಯಕ್ತಪಡಿಸುತ್ತ ಎರಡೂ ಊರಿನ ದುಃಸ್ಥಿತಿಯನ್ನು ವಿವರವಾಗಿ ವಿವರಿಸಲು ಹೋಗುತ್ತಾನೆ. ಜೊತೆಗೆ ತಮಟೆ ಬಡಿಯುವವರ ವಿಚಾರವನ್ನು ಪ್ರಸ್ತಾಪ ಮಾಡುತ್ತಾನೆ. ಪ್ರಸ್ತುತ ವಿಚಾರದಲ್ಲಿ ಹೊಲಗೇರಿಯವರೆಂದೇ ಪ್ರಸ್ತಾಪ ಮಾಡುವಾಗ ಜಾತಿ ವಿಚಾರವೂ ನಮ್ಮ ಕಣ್ಣೆದುರಿಗೇ ಗೋಚರವಾಗುತ್ತದೆ. ಹುಲ್ಲುಕೆರೆಯವರು ಎಲ್ಲಾ ವರ್ಗದ ಜನರನ್ನು ಕಾದಂಬರಿಯಲ್ಲಿ ಪ್ರಸ್ತಾಪ ಮಾಡಿ ಅವರ ಪಾತ್ರದ ಪೋಷಣೆಯ ಜೊತೆಗೆ ಪುಷ್ಠಿ ತುಂಬಿದ್ದಾರೆ.

ಪ್ರಸ್ತುತ ಸಂದರ್ಭದಲ್ಲಿ ಜೋಗಿಗೌಡರು ತಮ್ಮ ಅಸ್ತಿತ್ವವನ್ನು ಉಳಸಿಕೊಳ್ಳಲು ಗೌಡರ ಮೊರೆ ಹೋಗುತ್ತಾರೆ. ಬಸವೇಗೌಡರ ಹತ್ತಿರ ಊರಿನ ಅಭಿವೃದ್ಧಿ ವಿಚಾರವಾಗಿ ಪ್ರಸ್ತಾಪಿಸುತ್ತಾ ದೊಡ್ಡಿಯ ಜನರ ಮತ್ತು ಕಲ್ಲುಕೆರೆಯ ಜನರ ಮನಸ್ಸನ್ನು ವಿಶ್ವಾಸಕ್ಕೆ ತೆಗೆದುಕೊಂಡು ಗೌಡ್ರೆ ನಿಮ್ಗೆ ಗೊತ್ತು, ನಾನು ದೇವಸ್ಥಾನದ ಅಭಿವೃದ್ಧಿಗೆ ಅವಿರತವಾಗಿ ದುಡಿಯುತ್ತಿದ್ದಾನೆ. ಅದರ ಕೀರ್ತಿಗೆ ಇಡೀ ಜೀವನವನ್ನೇ ಮುಡುಪಾಗಿಡುತ್ತೇನೆ. ಈ ರೀತಿ ಇದ್ದರೂ ಹೊಲೆಯರು ನನ್ನ ಜೀವನವನ್ನು ಮುಳುಗಿಸಲು ಪ್ರಯತ್ನಿಸುತ್ತಿದ್ದಾರೆ. ಆ ಭೈರವನೇ ಕಾಪಾಡ್ ಬೇಕು. ಈ ವಿಚಾರವನ್ನು ಗೌಡರು ಕೇಳಸಿಕೊಂಡು ಏನಾಯಿತು ಸ್ವಾಮಿ ಎಂದಾಗ ಹೇಳ್ತೀನಿ ಏನಾಯಿತು ಅಂತ. ಬೆಳಗ್ಗೆ ದೇವಸ್ಥಾನದ ಪೂಜೆಗೆ ಹೊಲೆಯರು ತಡವಾಗಿ ಬಂದರು, ಯಾಕೆ ಎಂದೆ. ಸೂಳೇ ಮಕ್ಕಳು ಅಂತಾರೆ. ನಮಗೂ ದೇವರ ಕೊಡುಗೆ ಗದ್ದೆ ಕೊಡಿ. ನಿಮ್ಮ ಹಾಗೆ ಮೂರೊತ್ತು ಇಲ್ಲೇ ಕೂತ್ಕೊಂಡು ತಮಟೆ ಬಡೀತೀವಿ. ಹೊಟ್ಟೆ ತುಂಬ್ದೋರ್‌ಗೆ ಆ ದೇವರು ದೇವಸ್ಥಾನ. ನಮ್ಗೆಲ್ಲದೆ ಸ್ವಾಮಿ ಆ ಸ್ಥಾನ ಅಂತ ಕೇಳುವ ಧೈರ್ಯ ಬಂದಿದೆ. ಈ ರೀತಿಯಾಗಿ ನನ್ನನ್ನು ಗದರಿಸಿದರು. ಹೌದಾ ವಿಚಾರ್‌ಸ್ತೀನಿ ಸುಮ್ನಿರಿ.

ಏನೂ ಮಾಡುತ್ತೀರೊ ಗೊತ್ತಿಲ್ಲ ಗೌಡ್ರೆ, ನಾನು ತುಂಬಾ ಬಡವ, ನನಗೆ ಹೆಣ್ಣು ಮಕ್ಕಳು ಬೇರೆ ಮದುವೆ ಮಾಡಬೇಕು. ನನ್ನ ಮಗನಿಗೆ ಬೇಕಾದಷ್ಟು ಖರ್ಚು ಮಾಡ್ದೆ ಎಲ್ಲೂ ಹಾಳು ದೇವರು ದಾರಿ ತೋರಿಸಲಿಲ್ಲ. ಈ ಸಂದರ್ಭವನ್ನು ಗ್ರಹಿಸುವುದಾದರೆ ಪೂಜೆ ಸಲ್ಲಿಸುವ ಪೂಜಾರಿಯೇ ದೇವರನ್ನು ನಂಬುತ್ತಿಲ್ಲ ಎಂದಾದರೆ ದೇವರ ಅಸ್ತಿತ್ವದ ಬಗ್ಗೆ ನಮಗೆ ಹರಿವಿನ ಅಗತ್ಯವಿದೆ. ಇಲ್ಲಿ ಹುಲ್ಲುಕೆರೆಯವರು ತಮ್ಮ ಭಾಷೆಯಲ್ಲಿ ಎಲ್ಲಿಯೂ ಹಿಡಿತ ತಪ್ಪದೇ ಕೌಶಲದಿಂದ ಬಳಸಿ ಬರವಣಿಗೆಯ ಚಾಕಚಕ್ಯತೆಯನ್ನು ಉದಾರಿಕರಿಸಿರುವುದು ಗಮನಾರ್ಹದುದು. ಹಾಗೆಯೇ ಗುರುಸ್ವಾಮಿ ಜೋಗಿಗೌಡರು, ವಿಷಕಂಠೇಗೌಡರು ಎಲ್ಲರು ಒಂದು ಕಡೆ ಸೇರಿ ವಿಷಯ ಪ್ರಸ್ತಾಪ ಆದಾಗ ಗುರುಸ್ವಾಮಿಗಳು ನೇರವಾಗಿ ಪ್ರಶ್ನಿಸುತ್ತಾರೆ.

ಇಲ್ಲಿ ಮತ್ತೊಂದು ವಿಚಾರ ಸಂದರ್ಭಕ್ಕೆ ಉಚಿತವೆನಿಸುತ್ತದೆ. ತೆಂಡೆ ಕಾದಂಬರಿ ಒಳಗೆ ಜೋಗಿಗೌಡರು ತಮ್ಮ ಉಳವಿಗಾಗಿ ಹೋರಾಟ ನಡೆಸಿದರೆ ಗುರುಪಾದರು ತಮ್ಮ ಅಸ್ತಿತ್ವಕ್ಕೆ

ಎತ್ತಿಕಟ್ಟುತ್ತಾರೆ. ಹೊಲೆಯರ ಎತ್ತುಕಟ್ಟುವ ತಮ್ಮ ಕಾರ್ಯದಲ್ಲಿ ಯಶಸ್ವಿಯಾಗುತ್ತಾರೆ. ಗೌಡರು ತಮ್ಮ ಯಜಮಾನಿಕೆ, ಗತ್ತು-ಗಾಂಭೀರ್ಯವನ್ನು ಉಳಸಿಕೊಳ್ಳಲು ಹೋರಾಡುತ್ತಾರೆ. ಒಟ್ಟಾರೆ ಎಲ್ಲಾ ಸ್ವಾರ್ಥಕ್ಕಾಗಿ ನಡೆಯುತ್ತಿರುವ ಕಾದಂಬರಿಯ ಮತ್ತೊಂದು ಮುಖ್ಯವಾದ ಅಂಶವಾಗಿದೆ.

ಮಂಡ್ಯ ಜಿಲ್ಲೆಯ ಗೌಡರು, ಒಕ್ಕಲಿಗರು ಇವರ ಅಸ್ತಿತ್ವ, ಗೌರವ, ಗತ್ತುಗಳನ್ನು ಉಳಸಿಕೊಳ್ಳಲು ಹುಲ್ಲುಕೆರೆಯವರು ತಮ್ಮ ಲೇಖನದಲ್ಲಿ ನಮೂದಿಸಿರುವ ಸಮತೆಯ ಸಂಗತಿ ಇದರಲ್ಲಿದೆ. ಇದರ ಬಗ್ಗೆ ಹುಲ್ಲುಕೆರೆಯವರು ತಮ್ಮ "ವೀಕ್ಷಕ" ದಿನ ಪತ್ರಿಕೆಯಲ್ಲಿ ಒಂದು ಲೇಖನ ನಮೂದಿಸಿದರು. ಅಲ್ಲಿ ನೆಲದ ಬಸಿರಲ್ಲಿ ಹುಟ್ಟಿ ಬೆಳೆದು ಬೇಸಾಯವೇ ಮುಖ್ಯ. ಕಸುಬಾಗುಳ್ಳ ಒಕ್ಕಲು ಮಕ್ಕಳು ಒಕ್ಕಲಿಗರು. ಇದು ಕರ್ನಾಟಕದಲ್ಲಿ ಬಹುಸಂಖ್ಯಾತ ಜನಾಂಗವಾಗಿದೆ. ಮಂಡ್ಯ, ಮೈಸೂರು, ಬೆಂಗಳೂರು, ತುಮಕೂರು, ಕೋಲಾರ, ಹಾಸನ, ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಅಚ್ಚ ಕನ್ನಡಿಗರಾಗಿ ಹೆಚ್ಚು ಸಂಖ್ಯೆಯು ಕೊಡಗು, ಮಂಗಳೂರುಗಳಲ್ಲಿ ಕಂಡು ಬರುತ್ತದೆ.

ಒಕ್ಕಲಿಗರ ಕುಲದ ಸಂಕೇತವಾಗಿ ತಮ್ಮ ಹೆಸರಿನಿಂದ ಮುಂದೆ ಗೌಡ ಎಂಬುದಾಗಿ ಇಟ್ಟುಕೊಳ್ಳುತ್ತಾರೆ. ಪ್ರಾಚೀನ ಶಿಲಾ ಶಾಸನಗಳಲ್ಲಿ ಹಳೇಗನ್ನಡ ಸಾಹಿತ್ಯದಲ್ಲಿ ಗೌಡ್ತಿ, ಹೆಗ್ಗಡತಿ, ಒಕ್ಕಲಗಿತ್ತಿ ಎಂದು ಕರೆಯುವುದನ್ನು ಇಂದಿಗೂ ಕೇಳಬಹುದು. 'ಹೆಗ್ಗಡತಿ' 'ನಾಯಕ್' ಮನೆತನಗಳಲ್ಲೂ ಒಕ್ಕಲಿಗರು ಇರುವ ಹಾಗೆಯೇ ಒಕ್ಕಲಿಗರು ಮತ್ತು ರೆಡ್ಡಿಗಳು ಒಂದೇ ಕೆಂಡೆಯವರೆಂದು ಹೇಳಲು ಆಧಾರಗಳವೆ.

**ಗೌಡರ ಅಸ್ತಿತ್ವ** "ಗೌಡ ಶಬ್ಧವೂ ಪ್ರಾಚೀನವಾದುದು. ಪುರಾತನ ಗದ್ಯ ಸಾಹಿತ್ಯದಲ್ಲಿ ಚಪ್ಪನ್ನಾರು ದೇಶಗಲ ಹೆಸರೇಳುವಾಗ 'ಗೌಡ' ದೇಶವು ಪ್ರಸ್ತಾಪಿಸಲ್ಪಟ್ಟಿವೆ. ವಾತ್ಸಾಯನ ತನ್ನ ಕಾಮಸೂತ್ರದಲ್ಲಿ ಮಹಿಳೆಯ ಸ್ವಭಾವವನ್ನು ಪರಿಚಯ ಮಾಡಿಕೊಳ್ಳುತ್ತಾ ಗೌಡ ದೇಶದ ಸ್ತ್ರೀಯರು ಮೃದು ಭಾಷಿಗಳು ಪ್ರೇಮದ ಮತ್ತು ಕೋಮಲ ಶರೀರದವರು ಎಂಬುದಾಗಿ ವರ್ಣಿಸಿದ್ದಾನೆ. ಹೀಗೆ ಗೌಡರ ಅಸ್ತಿತ್ವವನ್ನು ಗಮನಿಸಬಹುದು. ಇಲ್ಲಿ ಬಳಸಿರುವ ಭಾಷೆಗೆ ಜೋಡಿ ಎಂದರೆ ಗೌಡರ ಅಸ್ತಿತ್ವ ಇರಲೇಬೇಕು ಅನಿಸುತ್ತದೆ. ಶ್ರೀ ಹುಲ್ಲುಕೆರೆಯವರು 'ಸೂಳೇ ಮಕ್ಕಳು', 'ಬೊಡ್ಡಿ ಮಕ್ಕಳು' ಹೀಗೆ ಬೈಯ್ಯುವ ಅಧಿಕಾರ ಉರಿನ ಗೌಡರಿಗೆ ಬಿಟ್ಟರೆ ಯಾರಿಗೂ ಇರುತ್ತಿರಲಿಲ್ಲ. ಇಡೀ ಕಾದಂಬರಿಯಲ್ಲಿ ಇಂತಹ ಬೈಗುಳಗಳನ್ನು ಅನೇಕ ಕಡೆ ಅಗತ್ಯಕ್ಕೆ ತಕ್ಕಂತೆ ಬಳಸಕೊಂಡಿರುವುದು ಅಚ್ಚರಿಯಲ್ಲ. ಇಲ್ಲಿ ಕೇವಲ ಗೌಡರೊಬ್ಬರೇ ಬೈಗುಳಗಳನ್ನು ಬಳಸುತ್ತಿಲ್ಲ. ಮೇಲ್ಜಾತಿ ಎನಿಸಿಕೊಂಡ ಪೂಜಾರಿ ಅರ್ಚಕ ವರ್ಗವೂ ಸಹ ಬಳಸಿರುವುದನ್ನು ಗಮನಿಸಬಹುದು. ಇಲ್ಲಿ ದೊಡ್ಡಿ, ಕಲ್ಲುಕೆರೆ ಊರಿನವರ ನಡುವಣ ಇರುವ ಕೊಡುಗೆ ಭೂಮಿಯ ವಿಚಾರದಲ್ಲಿ ಜೋಗಿಗಳು, ಗುರುಪಾದಸ್ವಾಮಿಗಳು "ನನ್ಮಕ್ಕಳು" ಎಂದೂ ಬೈಗುಳವಾಗಿ ಬಳಸಿರುವುದು, ಇದನ್ನು ಯಾವುದೇ ಮುಜುಗರವಿಲ್ಲದೇ ಅಗತ್ಯಕ್ಕೆ ತಕ್ಕ ಗ್ರಾಮೀಣ ಭಾಷೆಯ ಸೊಗಡನ್ನು ಅಷ್ಟೇ ಸೊಗಸಾಗಿ ವಿವರಿಸಿದ್ದಾರೆ.

ರಮೇಶ ಹುಲ್ಲುಕೆರೆಯವರು ಹೊಲೆಯರು, ಜೋಗಿಗಳು, ಗೌಡರು, ಕಲ್ಲುಕೆರೆ ದೊಡ್ಡಿ ಹೀಗೆ ಅನೇಕ ರೀತಿಯ ಸನ್ನಿವೇಶಗಳನ್ನು ಸೃಷ್ಟಿಸಿ ಕಾದಂಬರಿಯು ಎಲ್ಲಿಯೂ ಗಾಂಭೀರ್ಯ ಕಳೆದುಕೊಳ್ಳದಂತೆ ಎಚ್ಚರ ವಹಿಸಿದ್ದಾರೆ. ಈ ರೀತಿಯ ಬರವಣಿಗೆಯ ಪ್ರಭಾವ ಹೇಗೆ ಲಭಿಸಿತು ಎಂದರೆ ಕುವೆಂಪುರವರು, ಲಂಕೇಶ್ ರವರು, ತೇಜಸ್ವಿಯವರು, ಅನಂತಮೂರ್ತಿಯವರು, ಮಹದೇವರವರು ಮೊದಲಾದವರ ಪ್ರಭಾವ ಈ ಕಾದಂಬರಿ ರಚನೆಗೆ ಸ್ಫೂರ್ತಿಯಾಗಿದೆ.

ಸುಮಾರು ಎಪ್ಪತ್ತರ ದಶಕದಲ್ಲಿ ಕರ್ನಾಕದ ಸಾಮಾಜಿಕ ಬದಲಾವಣೆಗಳ ಅಗತ್ಯ ಇದ್ದಂತಹ ಸಂದರ್ಭಗಳಲ್ಲಿ ಈ ಎಲ್ಲಾ ಮಹನೀಯರು ರಚಿಸಿದ ಮಹಾನ್ ಕಾದಂಬರಿಗಳು, ಕೃತಿಗಳು, ಗ್ರಂಥಗಳಿಂದ ಪ್ರೇರಣೆ ಪಡೆದು ಭಂಡಾಯ, ನವ್ಯ, ನವ್ಯೋತ್ತರ, ಪ್ರಗತಿಶೀಲ ಮುಂತಾದ ದಲಿತ ಸಾಹಿತ್ಯ ಹೀಗೆ ಅನೇಕ ಚಳುವಳಿಗಳ ಬೀಜರೂಪಿಯಾಗಿ ಕೆಲಸ ಮಾಡಿದ ಪ್ರೇರಣೆಯಿಂದಾಗಿ ಹುಲ್ಲುಕೆರೆಯವರ ಸಾಹಿತ್ಯ ಇಷ್ಟು ಔಚಿತ್ಯಪುರ್ಣವಾಗಿ ರಚನೆಯಾಗಲು ಸಾಧ್ಯವಾಯಿತು. ಇಪ್ಪತ್ತರ ದಶಕದಲ್ಲಿ ಕ್ರಾಂತಿಕಾರಕ ಪರಿಣಾಮ ಬೀರಿತು. ಸಮಕಾಲೀನ ಲೇಖಕರನ್ನು ಪ್ರಭಾವಿಸಿತು. ಸಾಹಿತ್ಯವನ್ನು ರಾಜಕೀಯ, ಸಾಮಾಜಿಕ ಚಲನೆಗಳ ವಿರುದ್ಧವಾಗಿ ನಡೆಸುವ ನವ್ಯದ ಹುನ್ನಾರವನ್ನು ಬಯಲಿಗೆಳೆದು ಸಾಹಿತ್ಯಿಕ ಚಟುವಟಿಕೆಗಳಿಗೆ ಸಮಕಾಲೀನ ರಾಜಕೀಯ ದೀಕ್ಷೆಯನ್ನು ಪಡೆಯಿತು. ತೇಜಸ್ವಿಯವರು ಹೊಸ ಸಾಹಿತ್ಯ ಪಂಥವನ್ನು ಹುಟ್ಟು ಹಾಕುವಲ್ಲಿ ಯಶಸ್ವಿಯಾದ ಸಂದರ್ಭ, ಹೊಸ ಬಗೆಯ ಸಾಹಿತ್ಯ ಹಾಗೂ ರಾಜಕೀಯ ಚಿಂತನೆಗಳು ಅವಶ್ಯಕತೆಯ ಬಗ್ಗೆ ಕೇವಲ ಹೇಳಿಕೆಗಳನ್ನಲ್ಲ. ಪುರಾವೆಯಂತೆ ಸಾಹಿತ್ಯವನ್ನು ಸೃಷ್ಟಿಸಿರುವುದು. ಶಕ್ತ ಲೇಖಕರು ಯಾವಗಲೂ ಹೊಸ ಹಾದಿಯನ್ನು ತಮ್ಮ ಕೃತಿಗಳಲ್ಲಿ ಸೃಷ್ಟಿಸಿದ್ದಾರೆ. ಪ್ರಶ್ನೆ ಎಂದರೆ ತೇಜಸ್ವಿಯವರು ನವ್ಯ ಸಾಹಿತ್ಯವನ್ನು ಸಂಪೂರ್ಣವಾಗಿ ಬಿಡಲು ಆಗಲಿಲ್ಲ, ಸಂಪೂರ್ಣವಾಗಿ ಸ್ವೀಕರಿಸಲು ಆಗಲಿಲ್ಲ. ಈ ಎಲ್ಲಾ ರೀತಿಯ ಸಾಹಿತ್ಯವನ್ನು ಅಭ್ಯಾಸ ಮಾಡಿದ ಶ್ರೀ ಹುಲ್ಲುಕೆರೆಯವರು ತೆಂಡೆಯಂತಹ ಅದ್ಭುತ ಕಾದಂಬರಿ ರಚನೆಯಾಗಲು ಸಹಕಾರಿಯಾಯಿತು.

ತೆಂಡೆ ಕಾದಂಬರಿಯ ಮೂರನೇ ಭಾಗದಲ್ಲಿ ನಾವು ಗಮನಿಸಬಹುದಾದ ಸಂದರ್ಭವೂ ಗಮನಾರ್ಹವಾದುದು. ಇಲ್ಲಿ ಸಣ್ಣಮರಿ ಎಂಬ ವ್ಯಕ್ತಿಯು ರಾಗಿಗದ್ದೆಗೆ ನೀರು ಹಾಯಿಸುತ್ತಿದ್ದವನು ವಾಡೆ ತೆವರಿ ಮೊರೆಯಲ್ಲಿ ತಲೆ ಮರೆಸಿಕೊಂಡ. ಎದೆ ಡವಗುಟ್ಟತೊಡಗಿದಂತೆ ಮೋಟಬೀಡಿ ತೆಗೆದುಕೊಂಡು ತುಟಿಗೆ ಸಿಕ್ಕಿಸಿ ಬೆಂಕಿಕಡ್ಡಿ ಗೀರಿದ. ಹುರಿಯುತ್ತಿದ್ದ ಕಡ್ಡಿ ಹೊಣಗಿದ ತರಗಿನ ಮೇಲೆ ಬಿದ್ದು ಅಷ್ಟಗಲ ಕೌರುತ್ತಾ ಅತ್ತಿಕೊಂಡಿತು. ನಾಲೆಗೆ ಕಳ್ಳಪೈಪು ಹಾಕಿಕೊಂಡು ನೀರು ಕದಿಯುತ್ತಿದ್ದಾರೆಂದು ಯಾರೋ ಗುಲಾಮ ನನ್ಮಕ್ಕಳು ದೂರು ಕೊಟ್ಟಿದ್ದಾರೆ. 'ಮನೆಮುರುಕ ಮಕ್ಕಳು ಬದುಕುವುದ ಕಂಡು ಸಹಿಸಲಾರರು' ಅಂತ ಕೂತಲೇ ಗೊಣಗುತ್ತಿದ್ದ. ಅಷ್ಟರಲ್ಲಿ ಅಲ್ಲಿಗೆ ಒಬ್ಬ ಪೋಲೀಸ್ ಪೇದೆ ಬಂದ. 'ಯಾರೋ ಅವ್ನು' "ಸಬ್‌ಇನ್ಸ್‌ಪೆಕ್ಟರ್ ಕೂಗ್ತಾ ಇದ್ದಾರೆ ಬಾ"

ಎಂದು ಕೂಗಿದ. ಸಣ್ಣಮರಿಗೆ ಕಣ್ಣುಕಟ್ಟಿ ನೀರಿನಲ್ಲಿ ಅದ್ದಿದ ಹಾಗಾಯಿತು. ಪಂಟೆ ಗುದ್ದಲಿಯನ್ನು ನಡುಗದ್ದೆಗೆ ಎಸೆದು ಬಯಲಿನಲ್ಲಿ ಬಿದ್ದು ಕೆಡೆದು ಓಡತೊಡಗಿದ. ಅವನು ಮುಂದೆ, ಪೇದೆ ಹಿಂದೆ! ಬೇಟೆ ನಾಯಿ ಮೊಲ ಅಟ್ಟಿಸಿಕೊಂಡು ಹೋಡುವಂತೆ ಓಡತೊಡಗಿದ. ಓಡುತ್ತಾ ಓಡುತ್ತಾ ಪೋಲೀಸ್ ಪೇದೆ ಆಯಾ ತಪ್ಪಿ ಮುಗ್ಗರಿಸಿ ಮೊಖಾಡೆ ಬಿದ್ದ ರಭಸಕ್ಕೆ ಕೈಕಾಲುಗಳು ತರಚಿದವು. ಗರಿಗರಿಯಾದ ಹೊಸ ಬಟ್ಟೆಗೆ ಕೆಸರು ಮೆತ್ತಿಕೊಂಡಿತು. ಸಣ್ಣಮರಿ ಕೆಟ್ನಲ್ಲಪ್ಪೊ ಅಂತ ಕಿರುಚಿಕೊಂಡ. ಹೆದರಿ ತೆಂಗಿನಮರ ಹತ್ತಿ ಕುಳತುಬಿಟ್ಟ. ಸಣ್ಣಮರಿಯ ಸದ್ದು ಕೇಳ ಕಬ್ಬಿನ ಗದ್ದೆಯೊಳಗೆ ಮುರಿ ಮಾಡುತ್ತಾ ಗೊಬ್ಬರ ಸುರಿಯುತ್ತಿದ್ದ ಗಂಡು ಹೆಣ್ಣಾಳುಗಳು ನಾಲೆಯ ಹೇರಿ ಮೇಲೆ ನಿಂತ ಜೀಪು ಕಂಡು ಅಳತೆಯವರು ಇರಬೇಕು ಎಂದು ಭಾವಿಸಿಕೊಂಡು ದಿಕ್ಕಾಪಾಲಾಗಿ ಕಬ್ಬಿನ ಗದ್ದೆಯಲ್ಲಿ ಅವಿತುಕೊಂಡರು.

ತೆಂಗಿನ ಮರದ ಮೇಲೆ ಹೆಚ್ಚು ಹೊತ್ತು ಕೂರಲಾರದೇ ಕಾಲು ಜೋಗು ಹಿಡಿದುಕೊಂಡು ಜುಮುಗುಟ್ಟ ತೊಡಗಿದಾಗ ಸಣ್ಣಮರಿ ಧೈರ್ಯ ತಂದುಕೊಂಡು ಎಳನೀರು ನುಲುಚಿ ಕೆಳಗೆ ಬಿಟ್ಟ. ಎದೆ ಉಸಿರು ಬಿಡುತ್ತಿದ್ದ ಪೇದೆ 'ಇನ್ನೊಂದು' ಎಂದು ಕೀಳಸಿಕೊಂಡು ಚೂಪುಗಲ್ಲಿನಿಂದ ತೂತು ಮಾಡಿ ಕುಡಿದ ಮೇಲೆ ಹುಷಾರಾಗಿಳಯಪ್ಪ ನಾವೇನು ಮಾಡುವುದಿಲ್ಲ. ಬಿದ್ದು ಗಿದ್ದು ಸತ್ತರೆ ನನ್ನ ತಲೆಗೆ ಬತ್ತದೆ ಮಿತ್ತು ಎಂದು ಪೇದೆ ವೈನ ಮಾಡಿದ ಮೇಲೆ ಸಣ್ಣಮರಿ ಹಿಳದು ಬಂದವನೇ ರೇಗುತ್ತಾ ನಾನೊಬ್ನೆ ಅಲ್ಲ ಕಳ್ಳ ಪೈಪು ಹೂತಿರೋನು ಎಂದ. ಹೀಗೆ ಸಾಹೇಬರ ಮುಂದೆ ಹೇಳುವೆ ಬಾ, ಅವರು ನಿನಗೆ ಏನೂ ಮಾಡಲ್ಲ ಎಂದು ಸಣ್ಣಮರಿಯನ್ನು ಉಪಾಯವಾಗಿ ಸಾಹೇಬರ ಮುಂದೆ ತಂದು ನಿಲ್ಲಿಸಿದ. ಎಲ್ಲಾರೂ ಹಾಕ್ಕೊಂಡು ನೀರೈಯಿಸುತ್ತಾ ಇದ್ದಾರೆ, ನಾನೊಬ್ನೆ ಅಲ್ಲ ಸಾರ್, ಅದಕ್ಕೆ ತೆಂಗಿನಮರದ ಮೇಲೆ ಕೂತೆಯಾ, ಸತ್ತೋಗಿದ್ದರೆ ನಮ್ಮ ಪ್ರಾಣ ತೆಗಿತಿಯಲ್ಲೋ, ನಡೀ ಕಳ್ಳ ಪೈಪು ಯಾರವು ಅಂತ ತೋರ್ಸು.

ಇಷ್ಟು ದೂರ ಬಂದು ಬರೀ ಕೈಲಿ ಯಾಕೆ ಹೋಗೋದು ಅಂತ ಸಬ್‌ಇನ್ಸ್‌ಪೆಕ್ಟರ್ ಸಣ್ಣಮರಿ ತೋರಿಸಿದ ಇಪ್ಪತ್ತು ಮುವತ್ತು ಅಡಿ ಉದ್ದದ ಪ್ಲಾಸ್ಟಿಕ್ ಪೈಪುಗಳನ್ನು ಕೀಳಸಿ ಸುರುಳ ಸುತ್ತಿಸಿ ಜೀಪಿನಲ್ಲಿರಿಸಿಕೊಂಡು ಕೆಲವು ಪೈಪುಗಳಿಗೆ ಜಾಗ ಸಾಲದೇ ಉಳದುಕೊಂಡಾಗ ಅವುಗಳನ್ನು ಪಂಟೆ ಗುದ್ದಲಿಗಳನ್ನು ತರಿಸಿ ಹೊಡೆದು ಹಾಕಿದರು. ಇಲ್ಲಿ ಪೋಲೀಸರ ದೌರ್ಜನ್ಯವನ್ನು ಗಮನಿಸಬಹುದು. ಗದ್ದೆಯಲ್ಲಿ ಹೂತಿದ್ದ ಪೈಪನ್ನು ಗುದ್ದಲಿಯಿಂದ ಎಲ್ಲಿ ಬೇಕೆಂದರಲ್ಲಿ ಹೊಡೆದು ಹಾಕಿ ಒಂದು ವರ್ಷದ ಬೆಳೆಯನ್ನು ಹಾಳು ಮಾಡಿದರು. ಇದು ರೈತನ ಕಷ್ಟವನ್ನು ಸಹ ಹುಲ್ಲುಕೆರೆಯವರು ಹೇಳದ್ದಾರೆ. ಅಂದರೆ ಸ್ವಾತಂತ್ರ್ಯ ನಂತರ ಕೃಷಿಯ ಅಭಿವೃದ್ಧಿಗೆ ಸರ್ಕಾರ ಯಾವ ರೀತಿಯ ಯೋಜನೆಯನ್ನು ಕೈಗೊಂಡಿದೆ. ಅದು ಯಾವ ರೀತಿಯಲ್ಲಿ ಅನುಷ್ಠಾನಕ್ಕೆ ಬಂದಿದೆ ಎಂಬುದು ಪೋಲೀಸರ ದೌರ್ಜನ್ಯದಿಂದ ನಮಗೆ ಗೊತ್ತಾಗುತ್ತದೆ. ನಂತರ ಪೊತ್ತೆ ಧೈರ್ಯವನ್ನು ನಾವು ಕಾದಂಬರಿಯ ಪ್ರತಿಯೊಂದು

ಹಂತದಲ್ಲೂ ನಾವು ಗಮನಿಸಬಹುದು. ಮಳೆ, ಗುಡುಗು, ದೊಡ್ಡ ಕಾಡು, ಕತ್ತಲೆ ಇವೆಲ್ಲದರ ನಡುವೆ ನಡೆದುಬುರುವುದರಲ್ಲಿದೆ. ದಾರಿಯಲ್ಲಿ ಅಡ್ಡಗಟ್ಟಿದ ಹಾವು ಗೌಡರ ಮನೆಯ ಪ್ರವೇಶ ನಂತರ ಪಿಡ್ಡನನ್ನು ಹೆದುರಿಸುವುದು ಸಣ್ಣಮರಿಯನಿಗೆ ಪೊಲೀಸರು ಬಂದಾಗ ಧೈರ್ಯ ಹೇಳುವ ರೀತಿಗೆ ಜಾತಿ, ಶ್ರೀಮಂತಿಗೆ ಅಡ್ಡ ಬರಲಿಲ್ಲ. ಧೈರ್ಯ ಸಾಹಸದ ಮುಂದೆ ಯಾವುದೇ ಜಾತಿ ಎಂಬುದಿಲ್ಲ ಎಂಬುದನ್ನು ಲೇಖಕರು ತಿಳಿಸಿದ್ದಾರೆ. ಇತ್ತ ಕಡೆ ಗುರುಸ್ವಾಮಿ ಊರಿನ ಗೌಡರನ್ನೆಲ್ಲಾ ಸೇರಿಸಿ ಜೋಗಿಗೌಡನ ವಿರುದ್ಧ ಕಿವಿ ಊದಲು ಪೀಟಿಕೆ ಹಾಕಿಕೊಂಡು ಬಂದು ಗೌಡ್ರೆ ಹೊಲೆರನ್ನು ಎತ್ತಿಕಟ್ಟಿ ತಮಟೆ ಬಡಿಯದ ಹಾಗೆ ಮಾಡುತ್ತಿದ್ದಾನೆ ಎಂದು ಕಿವಿ ಕಚ್ಚಿದನು.

ಇಲ್ಲಿ ಸಾಮಾಜಿಕವಾಗಿ ಜನರು ಎಷ್ಟರಮಟ್ಟಿಗೆ ತಮ್ಮ ಅಸ್ತಿತ್ವಕ್ಕಾಗಿ ಒಬ್ಬರ ಮೇಲೆ ಒಬ್ಬರನ್ನು ಎತ್ತಿಕಟ್ಟುವ ಕಾರ್ಯ ಮಾಡಿದ್ದಾರೆ ಎಂಬುದು ಕಾದಂಬರಿಯಲ್ಲಿ ಸಮಯೋಚಿತವಾಗಿ ಬಂದಿದೆ. ಇಲ್ಲಿ ಪೂರ್ಣ ಪ್ರಜ್ಞೆಯನ್ನು ಲೇಖಕರು ಮೆರೆದಿದ್ದಾರೆ. ಇಲ್ಲಿ ಜೋಗಿಗೌಡರು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಕಲ್ಲುಕೆರೆಯ ಜನರನ್ನು ಎತ್ತಿಕಟ್ಟಲು ಸೂಕ್ತ ಸಮಯ ತಾನಾಗಿಯೇ ಒದಗಿ ಬಂದುದು ತಮ್ಮಡಿ ಗುರುಸ್ವಾಮಿಗೆ ನೀರಿನಲ್ಲಿ ಮುಳುಗುತ್ತಿದ್ದವನಿಗೆ ಹುಲ್ಲುಕಡ್ಡಿ ಸಿಕ್ಕಿದಷ್ಟು ಆನಂದವಾಯಿತು.

"ಸ್ವಾಮಿ" ಜೋಗಿ ಎರಡು ತಲೆ ಹಾವು, ಏನೂ ಅಂತ ತಿಳಿದುಕೊಂಡಿದ್ದೀರಿ ಅವನನ್ನು, ಈ ಕೆಲಸವನ್ನು ತನ್ನ ಮಗನ ಕೈಲಿ ಮಾಡಿಸಿಬಿಟ್ಟು ನಾನು ಕಾಣೆ, ನಮ್ಮ ಹುಡುಗ ತಿಳಿದೇ ಮಾಡಿಬಿಟ್ಟಿದ್ದಾನೆ ಎಂದು ತಪ್ಪಿಸಿಕೊಳ್ಳಲು ಕೂಡ ಹೇಸುವುದಿಲ್ಲ. ನಿಮ್ಮ ವಿರುದ್ಧ ದೊಡ್ಡಿ ಹೊಲೆಯರನ್ನು ಎತ್ತಿಕಟ್ಟಿದ್ದಾನೆ. ದೇವಸ್ಥಾನದ ಕೊಡುಗೆ ಜಮೀನನ್ನು ಬಿಡಿಸಿ ಕೊಡುತ್ತೇನೆ ಎಂದು ಮೀಸೆ ತಿರುಗಿಸಿದ್ದನೆ. "ದುಡ್ಡಿನ ಮದ ಅದು, ಅವರನ್ನು ಹಾಗೆ ಆಡಿಸುತ್ತಾ ಇದೆ". ಅದನ್ನು ಕರಗಿಸುವವರೆಗೂ ಅವನ ಕೆಚ್ಚು ಕಡಿಮೆ ಆಗಲ್ಲ ಎಂದು ಪಟೇಲರು ಗುಡುಗಿದರು. ಅವನು ಏನು ಮಡಗಿದ್ದಾನೆ. ಅವರ ಅಪ್ಪ ಕಂತಿನ ಜೋಗಿ. ಈ ಊರಿಗೆ ಹರಳಾಕಿ ಹೋಗಿಬಿಟ್ಟ. ಹಳೆಯ ಊರಿಗೆ ಕಾಲುವೆ ಬರುತ್ತದೆ. ಬಾರೆಗೆ ಹೋಗಿ ಊರನ್ನು ಕಟ್ಟಿಕೊಳ್ಳಿ ಅಂತ ಎಲ್ಲರಿಗೂ ಪರಿಹಾರ ಕೊಟ್ಟು ಸರ್ಕಾರದವರೇ ನಿವೇಶನವನ್ನು ಕೊಟ್ಟರು. ತನ್ನ ಹೊಲದಲ್ಲಿ ಊರು ಕಟ್ಟಿದರೆ ಸೈಟಿಗೆ ದುಡ್ಡು ಬರುತ್ತೆ ಎಂದು ನಡು ರಾತ್ರಿಯಲ್ಲಿ ಹೋಗಿ ಜನರಿಗೆ ಕಿವಿ ಹೂದಿ ಎತ್ತಿಕಟ್ಟಿದ. ಸರ್ಕಾರದ ಸೈಟಿನಲ್ಲಿ ಯಾಕೆ ಹಟ್ಟಿ ಕಟ್ಟವುದಕ್ಕೆ ಹೋದಿರಿ. ಅದು ಮೊದಲೇ ಗೋಮಾಳ. ನಮ್ಮ ಮಕ್ಕಳು ಮರಿ ಮುಂದೆ ಬದುಕಿ ಬಾಳಬೇಕಾಗಿರುವವರು. ಗೋಮಾಳದಲ್ಲಿ ಹಟ್ಟಿ ಕಟ್ಟಿದರೆ ನೀವು ಉಳಿಯುವುದಿಲ್ಲ. ನಿಮ್ಮ ವಂಶ ಹಾಳಾಗುತ್ತದೆ ಅಂತ ಚಿತಾವಣೆ ಮಾಡಿ ಬಡವರು, ಬಲ್ಲಿದರು, ಎಲ್ಲರಿಗೂ ದುಡ್ಡು ಕೊಡುತ್ತೀನಿ ಬನ್ನಿ, ಮನೆ ಕಟ್ಟುವಿರಿ ಅಂತ ಹುಬ್ಬಿಸಿ ದೊಡ್ಡಿಯನ್ನು ಎರಡು ಮಾಡಿದ ಚಂಡಾಳ ಅವನು, ಎಂದು ಪಟೇಲರು ಅವನನ್ನು ಹೀಯಾಳಿಸಿದರು.

ದೊಡ್ಡಿ ಕಟ್ಟಿದೋನು ಸುಬ್ಬೇಗೌಡ ಅವರ ಕೈಯಲ್ಲಿ ಏನಾಗುತ್ತಿತ್ತು, ಬರಿ ಮಾತು. ಹಿಂದೆ ಬಸವೇಗೌಡನೂ, ಸುಬ್ಬೇಗೌಡನೂ ತೋಟದ ಗದ್ದೆ ಮಾತಿಗೆ ಕಚ್ಚಾಡಿಕೊಂಡು ಪಂಚಾಯಿತಿಗೆ ಬಂದರು. ಇದು ಬಾವ ಬಾಮೈದನ ಮಾತು ಪಂಚಾಯಿತಿಗೆ ಯಾಕೆ ತಂದಿರಿ. ಒಳ್ಳೇದು ಕೆಟ್ಟದ್ದು ನೀವೆ ತೀರ್ಮಾನ ಮಾಡಿಕೊಳ್ಳಿ ಅಂತ ಕಳಿಸಿಕೊಟ್ಟಿದೆ. ಆದರೆ ಪಿಡ್ಡೆಯರ ಚನ್ನೇಗೌಡ ಕಿತ್ತಾಡಲಿ ನನ್ನ ಮಕ್ಕಳು ಅಂತ ನ್ಯಾಯ ಮಾಡೋಕೆ ಪಂಚಾಯಿತಿ ಇದೆ. ನ್ಯಾಯ ನಡಿಲೇಬೇಕು ಅಂತ ಹೇಳಿ ವಾದ ಮಾಡಿದರು. ನ್ಯಾಯ ಬಾಡು ತಿಂದ ಕಡೆ ಆಯಿತು. ಸುಬ್ಬೇಗೌಡ ಮುನಿಸಿಕೊಳ್ಳುತ್ತಾನೆ. ಎಷ್ಟೇ ಆದರೂ ನನ್ನ ಅಣ್ಣ-ತಮ್ಮ ನಾಳೆ ಕಷ್ಟ-ಸುಖಕ್ಕೆ ಬೇಕಾಗುತ್ತಾನೆ. ಅಂದುಕೊಂಡು ಕಂತಿನ ಜೋಗಿಗೆ ಸಹಾಯ ಮಾಡಿದ. ಸುಬ್ಬೇಗೌಡರು ಇಲ್ಲ ಅಂದಿದ್ದರೆ ಜೋಗಿಯ ಕೈಯಲ್ಲಿ ದೊಡ್ಡಿಯನ್ನು ಕಟ್ಟಲು ಸಾಧ್ಯ ಆಗುತ್ತಿರಲಿಲ್ಲ. ನಮ್ಮ ಪಟೇಲ ಅವನನ್ನು ಈ ಊರಲ್ಲಿ ಕುಳವಾಗಿ ಇರಿಸಿಕೊಳ್ಳುತ್ತಿರಲಿಲ್ಲ. ಹೀಗ ಅದೆಲ್ಲವನ್ನು ಯಾರು ನೆನೆಸಿಕೊಳ್ಳುತ್ತಾರೆ. ಎಂದು ಹೇಳಿ ಸಣ್ಣಮರಿಯನ್ನು ತರಾಟೆಗೆ ತೆಗೆದುಕೊಂಡು ಜೋಗಿಗೌಡರು ಚೆನ್ನಾಗಿ ಬೈದು ಅವನನ್ನು ಮನೆಯಲ್ಲಿಯೆ ಇರು, ಕಲ್ಲಕೆರೆಯ ಜನ ಕೆಟ್ಟವರು, ಮಚ್ಚರ ಇಟ್ಟುಕೊಂಡು ನಿನಗೆ ಏನಾದರೂ ಹೆಚ್ಚು ಕಡಿಮೆ ಮಾಡಿಬಿಡುತ್ತಾರೆ ಅಂತ ಹೇಳಿ ಸುಬ್ಬೇಗೌಡರ ಮನೆಗೆ ಬಂದು ನಡೆದ ವಿಚಾರವನ್ನೆಲ್ಲಾ ತಿಳಿಸಿ ಹೊರಡುತ್ತಾರೆ.

ಕಾದಂಬರಿಯಲ್ಲಿ ಹುಲ್ಲುಕೆರೆಯವರು ಪ್ರೀತಿಯ ವಿಷಯವನ್ನು ಕೂಡ ವ್ಯಕ್ತ ಪಡಿಸುತ್ತಾರೆ. ಕಾದಂಬರಿಯಲ್ಲಿ ಶಿವಮಲ್ಲ, ಪಿಡ್ಡೆ, ನವೀನ ಎನ್ನುವಂತ ಪಾತ್ರಗಳು ಪ್ರೇಮ ವಿಚಾರವನ್ನು ವ್ಯಕ್ತ ಪಡಿಸುತ್ತವೆ. ಹುಲ್ಲುಕೆರೆಯವರು ತಮ್ಮ ಸೀಮಿತ ಅವಧಿಯಲ್ಲಿ ಎಲ್ಲಾ ರೀತಿಯ ಸಾಮಾಜಿಕ, ರಾಜಕೀಯ, ಲೈಂಗಿಕತೆ, ಆಷಾಢಭೂತಿತನ ಎಲ್ಲವನ್ನೂ ಕಾದಂಬರಿಯಲ್ಲಿ ಕಟ್ಟಿಕೊಟ್ಟಿದ್ದಾರೆ.

ಕಾದಂಬರಿಯ ನಾಲ್ಕನೇ ಭಾಗದಲ್ಲಿ ಬನ್ನಿ ಮಂಟಪಕ್ಕೆ ಪೂಜೆ ಸಲ್ಲಿಸಲು ಹೋಗುತ್ತಾರೆ. ಅಲ್ಲಿ ನಡೆಯುವ ದೃಶ್ಯವನ್ನು ಬಹಳ ರೋಮಾಂಚನಕಾರಿಯಾಗಿ ಚಿತ್ರಿಸಿದ್ದಾರೆ. ಅಂದು ಆಯುಧಪೂಜೆಯ ದಿನ ಕೋಳಿ ಕೂಗುವ ಮೊದಲೇ ಕಲ್ಲುಕೆರೆ ದೊಡ್ಡಿಯ ಜನರು ಎಚ್ಚರಗೊಳ್ಳುತ್ತಾರೆ. ಆಲೆಮನೆಗಳೆಲ್ಲಾ ಅರಮನೆಯಂತೆ ಹಟ್ಟಿಗಳೆಲ್ಲಾ ಮದುವೆಯ ಮನೆಯಂತೆ. ಬೈರು ಗಾಡಿಗಳೆಲ್ಲಾ ತೇರಿನಂತೆ ಊರಿಗೆ ಊರೇ ನಿಂತು ಸಿಂಗರಿಸತೊಡಗಿತ್ತು. ಬೋರದೇವರ ಗುಡಿಗೆ ಸುಣ್ಣ ಬಣ್ಣ ಹೊಡೆದು, ಹಸಿರು ಚಪ್ಪರ ಹಾಕಿ, ಬಾಳೆ ಕಂಬ ಕಬ್ಬಿನ ಜಲ್ಲೆ ತಂದು ಚಪ್ಪರದ ಕಂಬಗಳಿಗೆ ಕಟ್ಟಿದರು. ಕಲ್ಲು ಕಂಬಗಳಿಗೆಲ್ಲಾ ಬಣ್ಣ ಬಣ್ಣದ ಚಿತ್ರವನ್ನು ಕೊರೆದು ಅಂಟಿಸಿದರು. ಗುರುಸ್ವಾಮಿ ಗರ್ಭಗುಡಿಯ ಒಳಗೆ ಬಾಳೆಯ ಕಂದಿನಲ್ಲಿ 'ಕಡ್ಡಿ' ಕೊರೆದು ಅಲಂಕರಿಸಿದ್ದ.

ನಾಲ್ಕು ಆಳುಗಳ ಹಿಂಪಾರ-ಮುಂಪಾರದಲ್ಲಿ ದೇವರ ಪೆಟ್ಟಿಗೆಯನ್ನು ಹೊರಿಸಿಕೊಂಡು ರಿವಾಲ್ವರ್‌ನ್ನು ಸೊಂಟದಲ್ಲಿ ಅಲ್ಲಾಡಿಸಿಕೊಂಡು ಬಂದ ಬಸವೇಗೌಡರು ಗುರುಸ್ವಾಮಿಗೆ ಒಪ್ಪಿಸಿದರು. ಆಯುಧಪೂಜೆಯ ಪರ ನಡೆಯುವಂತಹ ವಿಶೇಷ ಸಂದರ್ಭಗಳಲ್ಲಿ ಚಿನ್ನ-ಬೆಳ್ಳಿ

ಡವೆಗಳನ್ನು ಅಲಂಕರಿಸಿದರೆ ನೋಡುವುದಕ್ಕೆ ಎರಡೂ ಕಣ್ಣುಗಳು ಸಾಲದು. ಗುರುಸ್ವಾಮಿ ಲೆಕ್ಕ ಗೆದುಕೊಳ್ಳುತ್ತಿದ್ದ. 'ಚಿನ್ನದವು ಒಂದು ಮುಖವಾಡ, ಒಂದು ಕಿರೀಟ, ಮುವತ್ತು ಕಾಸು, ಹತ್ತು ರುಗೆಜ್ಜೆ, ಒಂದು ಮಂಗಳಾರತಿ ತಟ್ಟೆ, ಚಮಚ, ಗಂಧದ ಬಟ್ಟಲು, ತ್ರಿಶೂಲ ದೊಡ್ಡದು, ಳ್ಳಿಯವು ಏಳು, ಪೂಜೆಯ ಕಳಸ, ಒಂದು ಗಿಂಡಿ, ಒಂದು ಫೋಟೊ, ಎರಡು ಕುದುರೆಗಳು, ಂದು ಗಂಟೆ, ಎರಡು ಖಡ್ಗ, ಒಂದು ಬೆತ್ತ, ಒಂದು ಚಂಬು, ಉಳಿದಿದ್ದೆಲ್ಲಾ ಸಣ್ಣ ಪುಟ್ಟ ಾಮಾನುಗಳು. ಒಂದು ಚಿನ್ನದ ನೀರು ಬಿಡಿಸಿದ ಹಿತ್ತಾಳೆ ಪ್ರಭಾಳೆ'.

ಗುರುಸ್ವಾಮಿಗೆ ದೇವರು ಒಡವೆ ಒಪ್ಪಿಸಿದ ಬಸವೇಗೌಡರು ಗುಡಿಯ ಬಾಗಿಲಿನಲ್ಲಿ ಂಬಿಕಸ್ತ ಆಳನ್ನು ನಿಲ್ಲಿಸಿ ಅವನಿಗೆ 'ಗುರುತು ಇಲ್ಲದವರನ್ನು ಯಾರನ್ನು ಒಳಗೆ ಬಿಡಬೇಡ' ಂದು ತಾಕೀತು ಮಾಡಿದರು. ಬಸವೇಗೌಡ ಸೊಂಟದಲ್ಲಿ ನೇತಾಡುತ್ತಿದ್ದ ರಿವಾಲ್ವರ್ ುಡುಗರ ಕುತೂಹಲ ಕೆರಳಿಸಿ ಅವರು ಕೂತಲ್ಲಿ ನಿಂತಲ್ಲಿ ಬೆಲ್ಲಕ್ಕೆ ಇರುವೆಗಳು ಮುತ್ತಿಕೊಂಡಂತೆ ುತ್ತಿಕೊಂಡು ಅವರನ್ನು ಹಾಗಾಗ ಕೆರಳಿಸುತ್ತಿದ್ದರು. ಇಲ್ಲಿ ರಮೇಶ ಹುಲ್ಲುಕೆರೆಯವರು ಗೌಡರ ತ್ತು, ಯಜಮಾನಿಕೆಯನ್ನು ಬಹಳ ಅರ್ಥವತ್ತಾಗಿ ವ್ಯಕ್ತಪಡಿಸಿದ್ದಾರೆ.

ಕಲ್ಲುಕೆರೆ ದೊಡ್ಡಿಯು ಆ ದಿನ ನೋಡುವುದಕ್ಕೆ ಒಂದು ಚೆಂದ. ಸಾಲಾಗಿ ಹಾದಿ ಉದ್ದಕ್ಕೂ ೀಪಗಳ ಸರ ಕಲ್ಲುಕೆರೆಯಿಂದ, ದೊಡ್ಡಿಯಿಂದ ಶಿಸ್ತಾಗಿ ಸಿಂಗರಿಸಿಕೊಂಡ ಹೆಂಗಸರು ಆರತಿ ಟ್ಟೆಯಲ್ಲಿ ದೀಪವನ್ನು ಇಟ್ಟುಕೊಂಡು ಬರತೊಡಗಿದ್ದು, ದೂರದಿಂದ ನೋಡಿದವಿಗೆ ದೀಪಗಳ ೋರಣ ಕಟ್ಟಿದಂತೆ ತೋರುತ್ತಿತ್ತು.

ಅಂಗಳದ ತುಂಬೆಲ್ಲಾ ದೊಡ್ಡಿಯವರೇ ತುಂಬಿಕೊಂಡಿದ್ದಾರೆ ಎಂದು ಗುರುಸ್ವಾಮಿ ಳಗೊಳಗೆ ಗೊಣಗಿಕೊಂಡು ಒಕ್ಕಲಿಗರ ನಂಬುವುದು ಕಷ್ಟ ಎಂದು ತಿಳಿದು ಕೂಡಿ ಬಾಳಿದರೆ ಷ್ಟು ಚೆಂದ, ಏನು ಆನಂದ ಅಂತ ಸಿದ್ಧೇಗೌಡರು ಹೇಳುತ್ತಾರೆ. ಬೆಳಗ್ಗೆಯಿಂದ ಒಬ್ಬರು ಸುಳಿವು ಇಲ್ಲ. 'ಈಗ ಬಂದವರೆ ಮಗ ಮುದ್ದಾಡುವುದಕ್ಕೆ' ಎಂದು ಪಟೇಲರು ಹೀಯಾಳಿಸಿದರು.

ಇತ್ತ ಕಡೆ ಬಸವೇಗೌಡರು ಪೊತ್ತೆಯನ್ನು ಕರೆದು ಗುಡಿಯ ಸುತ್ತ ಅಜಮಾಯಿಸಿ ಮಾಡಿಕೊಂಡಿರುವಂತೆ ತಾಕೀತು ಮಾಡಿದರು. ಪೊತ್ತೆ ಪೋಲೀಸರಿಗೆ ಹೇಳಿ ಕಳುಹಿಸಬೇಕೆಂದು ೂಚಿಸಿದಾಗ ಒಂದು ರಾತ್ರಿಗೆ ಯಾಕೆ? ಸ್ವಲ್ಪ ನೀವೆ ಹೆಚ್ಚರವಾಗಿ ಕಾಯಿರಿ ಎಂದರು.

ಪೂಜೆಗೆ ಬಸವೇಗೌಡರ ಮನೆಯ ಆರತಿ ಆಯಿತು. ಅಮೇಲೆ ಉಳಿದವರ ಸರದಿ. ಕಿವಿ ೂತಾಗುವಂತಹ ತಮಟೆ ಸದ್ದು. ಪೂಜೆಯನ್ನು ಹೊರಗೆ ತಂದು ಗುರುಸ್ವಾಮಿಗೆ ಹೊರಿಸಿ, ೂಮಾಲೆ ಹಾಕಿ ಹುಡುಗರು ಕೇಕೆ ಹಾಕುತ್ತ, ತಮಟೆಯವರು ಮತ್ತಷ್ಟು ಜೋರಾಗಿ ಸದ್ದು ಮಾಡುತ್ತಾ ಇಳಿ ವಯಸ್ಸಿನ ಗುರುಸ್ವಾಮಿಯನ್ನು ಕೆರಳಿಸಿದರು. ಆವೇಶ ಬಂದಂತೆ ಹುಚ್ಚು ುಚ್ಚಾಗಿ ಕುಣಿಯುತ್ತಾ ಪೂಜೆಯನ್ನು ಗಿರಗಿರನೆ ತಿರುಗಿಸುತಾ ಇರುವಾಗ ಅವನ ಂದಿಕಂಬದವರು, ಛತ್ರಿಯವರು, ತ್ರಿಶೂಲ ಹೊತ್ತವರು, ಹುಡುಗರು, ಮುದುಕರು ರಂಗ ಕಟ್ಟಿ

ಕುಣಿದರು. ಹೀಗೆ ಪೂಜೆಯು ಸಾಂಗವಾಗಿ ನಡೆಯುತ್ತಿರುವಾಗ ಭಾರಿ ದೊಡ್ಡ ಘಟನೆಯೊಂದು ನಡೆಯುತ್ತದೆ. ದೇವಸ್ಥಾನದ ಒಡವೆಗಳು ಕಳವಾಗುತ್ತವೆ. ಈ ಕಾದಂಬರಿಯಲ್ಲಿ ಎರಡೂ ಊರಿನ ಜನರು ಕಳವು ಮಾಡುತ್ತಾರೆ. ಇದರಿಂದ ಭಾರಿ ಅನಾಹುತವೇ ಸಂಭವಿಸುತ್ತವೆ. ಕಾನೂನು ರೀತಿಯಲ್ಲಿ ಕ್ರಮವು ಜರುಗುತ್ತವೆ. ಹೀಗೆ ಅನೇಕ ರೀತಿಯ ಗೊಂದಲಗಳು ಈ ಸಂದರ್ಭದಲ್ಲಿ ನಡೆದು ಹೋಗುತ್ತವೆ. ಇಡೀ ಬೋರದೇವರ ಗುಡಿಯ ಸ್ಥಳವು ರಣರಂಗವಾಗಿ ಎರಡೂ ಊರುಗಳ ನಡುವೆ ಶೋಚನೀಯ ಸ್ಥಿತಿ ನಿರ್ಮಾಣವಾಗುತ್ತದೆ. ಒಟ್ಟಾರೆ ಅನೇಕ ಸ್ಥಿತಿಗಳ ನಡುವೆ ನಡೆಯುವ ಈ ಕಾದಂಬರಿಯ ವಸ್ತು ಚಿತ್ರಣವು ಬಹಳ ರೋಮಾಂಚನಕಾರಿಯಾದುದು.

ಪೋಲೀಸರಿಗೆ ದೂರು ಮುಟ್ಟಿಸಿದರು. ದೂರು ಮುಟ್ಟಿದ ಕೂಡಲೇ ಪೋಲೀಸರು ಕಲ್ಲುಕೆರೆ, ದೊಡ್ಡಿಗಳಲ್ಲಿ ಯಾರಾದರು ಬಂದರೆ ಸಾಕು. ಇವರು ಪೋಲೀಸರೇ ಇರಬೇಕು ಎನ್ನುವ ಕನವರಿಕೆ ಅಲ್ಲಿನ ಪ್ರತಿ ಗಂಡಸರಲ್ಲಿಯು ಭಯದ ಛಾಯೆ ಮೂಡಿತು. ಹೀಗೆ ಕಾದಂಬರಿಯಲ್ಲಿ ಎರಡು ಊರುಗಳ ನಡುವಿನ ದ್ವೇಷ ಚಿತ್ರಣವನ್ನು, ಜೋಗಿಗೌಡರ ಸ್ವಾರ್ಥವನ್ನು, ಗೌಡರ ನಿಲುವನ್ನು ಶ್ರೀಯುತರು ಸ್ವಲ್ಪವೂ ಚ್ಯುತಿ ಬರದ ಹಾಗೆ ಕಾದಂಬರಿಯನ್ನು ರಚಿಸಿದ್ದಾರೆ.

ಮತ್ತೊಂದು ಕಾದಂಬರಿಯ ಭಾಗವಾದ ಐದನೇ ಭಾಗವು ಪೊತ್ತೆ ಮತ್ತು ಅವನ ತಾಯಿ, ಗೌಡರು, ಪೊತ್ತೆಯ ತಾಯಿಯ ಸಾವು, ಪೊತ್ತೆಯ ಸಾವು ಹೀಗೆ ಅನೇಕ ದುರಂತ ಘಟನೆಗಳನ್ನು ವ್ಯಕ್ತಪಡಿಸುತ್ತದೆ.

ಊರಿನಲ್ಲಿ ಆದ ಗಲಾಟೆಯಿಂದ ಮತ್ತು ಪೊತ್ತೆಯ ಸಾವಿನಿಂದ ಬೇಸತ್ತ ಬಸವೇಗೌಡರು ಎಷ್ಟು ಹೇಳಿದರು ಹೊತ್ತಿಗೆ ಸರಿಯಾಗಿ ಊಟ ಮಾಡಲಿಲ್ಲ ಮತ್ತು ಅವನ ಹೆಂಡತಿಯ ಸಾವು ಅವರ ಅಸ್ತಿತ್ವವನ್ನು ಹಿಡಿದು ಅಲುಗಾಡಿಸುವಂತಿತ್ತು. ಮರೆಯಬೇಕು ಎಂದು ಎಷ್ಟೇ ಪ್ರಯತ್ನಿಸಿದರು ನೆನೆಪು "ಸಾಕಿದ ನಾಯಿಯಂತೆ ಅಟ್ಟಿಸಿಕೊಂಡು ಬಂದು ಕಾಡತೊಡಗಿತು". ಬಸವೇಗೌಡರು ತನ್ನಷ್ಟಕ್ಕೆ ತಾನೇ ಪಶ್ಚಾತಾಪ ಪಡುವ ರೀತಿ ಬಹಳ ಶೋಚನೀಯವಾದುದು. ಸುಬ್ಬೇಗೌಡರನ್ನು ಸಾಯಿಸಿರುವುದು ಎಂಬುದು ಬಸವೇಗೌಡ ಎಂಬುದು, ಅವನ ಗತ್ತು-ಗಮ್ಮತ್ತು, ಹಣ-ಆಸ್ತಿ ಎಲ್ಲವನ್ನು ಒಂದೇ ಕ್ಷಣದಲ್ಲಿ ಅಡಗಿಸಿಬಿಟ್ಟಿತು. ಅವರು ಪಶ್ಚಾತಾಪದಿಂದ ಆಡಿದ ಮಾತು ಏನೆಂದರೆ "ನನ್ನ ತಲೆಗೆ ಸಾಕು, ಆಸ್ತಿಯನ್ನು ಕೂಡಿಟ್ಟರೆ ಮನುಷ್ಯ ಸುಖವಾಗಿ ಇರುತ್ತಾನೆ ಎಂಬುದು ಬರಿ ಭ್ರಾಂತಿ, ಹಣದ ವ್ಯಾಮೋಹ ಮನುಷ್ಯತ್ವವನ್ನು ನುಂಗಿ ಬಿಡುತ್ತದೆ" ಎಂಬ ಪ್ರಶ್ನೆ ಹಾಕಿಕೊಂಡು ಯೋಚಿಸುತ್ತಾ ಕೂರುತ್ತಾನೆ.

ಈ ಎಲ್ಲಾ ಆದರ್ಶವನ್ನು ನೋಡುವುದಾದರೆ ಮನುಷ್ಯ ತನ್ನ ಜೀವನವನ್ನು ತನ್ನ ಪರಿವಾರದವರನ್ನು ರಕ್ಷಿಸಲು, ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಏನೆಲ್ಲಾ ರೀತಿಯ ದುಷ್ಟ ಕೃತ್ಯಗಳನ್ನು ಎಸಗುತ್ತಾನೆ ಎಂಬುದು ಇಲ್ಲಿ ಗೋಚಾರವಾಗುತ್ತದೆ.

ಇನ್ನು ಮುಂದೆ ಕಾದಂಬರಿಯನ್ನು ಅವಲೋಕಿಸಿದಾಗ ಗೌಡರು ಪೊತ್ತೆಯ ತಾಯಿಯನ್ನು ದೈಹಿಕವಾಗಿ ಸಂಪರ್ಕ ಇಟ್ಟುಕೊಂಡು ಪೊತ್ತನಿಗೆ ಆಸ್ತಿಯನ್ನು ಬೆರೆದವರೆ ಎನ್ನುವ ಮಾತು ಪೊತ್ತೆಯ ಕಿವಿಗೆ ಬಿದ್ದು ಅವನ ಜೀವನವೇ ಜಿಗುಪ್ಸೆ ಆಗುತ್ತದೆ. ಈ ಮಾತುಗಳನ್ನು ಕೇಳಿ ರಕ್ತ ಕುದಿಯುತ್ತದೆ. ಆದರು ಸಹಿಸಿಕೊಂಡು ಹೇಗೊ ಮುಂದೆ ದಾರಿ ಸಾಗಿಸುತ್ತ ಇದ್ದರು. ಹೀಗಿರುವಾಗ ಒಂದು ದಿನ ಹುಲ್ಲು ಕುಯ್ಯುವ ಹುಡುಗರು ಪೊತ್ತೆಯನ್ನು ಕಂಡು 'ಹಾವು! ಹಾವು!' ಎಂದು ಅರಳಕಟ್ಟೆಯತ್ತ ಕೈತೋರಿಸಿದರು. ಇದನ್ನು ಹೀಗೆ ಬಿಟ್ಟರೆ ಎಲ್ಲರನ್ನು ಹೆದರಿಸುತ್ತದೆ. ಬಡ್ಡಿ ಮಗನದು ತಡಿರಿ ಅಂತ ಕವಲುಕಡ್ಡಿಯನ್ನು ತಂದು ಹುಡುಗರು ಹಾವನ್ನು ಚುಚ್ಚಿ ಕೆರಳಿಸಿ ಹೊರಕ್ಕೆ ಕಡೆಸಿದರು. ಸುಟ್ಟುಕೊಂಡ ನಾಗರಹಾವು ಮರಗುಡುತ್ತ ಅಂಗೈಯಗಲದ ಎಡೆ ಬಿಚ್ಚಿ ಬುಸ್ಸನೆ ಸದ್ದು ಮಾಡುತ್ತ ಸುತ್ತ ತಿರುಗಿ ನೋಡಿ ಸರ್ರನೆ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತದೆ. ಪೊತ್ತೆ ಕವಲುಕಡ್ಡಿಯನ್ನು ತಲೆಗೆ ಸಿಕ್ಕಿಸಿ ಎಡೆ ಎತ್ತದಂತೆ ಂಆಡಿದ. ಕಣ್ಣು ಮುಚ್ಚುವಷ್ಟರಲ್ಲಿ ಹಾವಿನ ಬಾಲವನ್ನು ಹಿಡಿದುಕೊಂಡು ಬುಗ ಬುಗನೇ ಸುತ್ತಿದ. ಆಮೇಲೆ ಮಾರುದ್ದದ ಹಾವನ್ನು ತಲೆ ಕೆಳಕ್ಕಾಗಿ ಹಿಡಿದುಕೊಂಡು ಎಡೆ ಎತ್ತಲು ಅವಕಾಶ ಕೊಡದಂತೆ ಹುಡುಗರಿಗೆ ತೋರಿಸುತ್ತ ನೆನ್ನೆ ದಿನ ಏನು ಆಟ ಆಡಿಸಿತು ಇದು. ಇವತ್ತು ಇದರ ಆಯಸ್ಸು ತುಂಬಿದೆ ಎನ್ನುತ್ತಿರುವಾಗ ಪಟೇಲರು ಓಡಿ ಬಂದರು.

"ಏಯ್ ಅದು ದೇವರ ಹಾವು ಒಡಿಬೇಡ ಬಿಟ್ಟು ಬಿಡು" ಕೈಗೆ ಸಿಕ್ಕಿದ್ದ ಎಂದೂ ಬಿಡೊನಲ್ಲ ನಾನು, ಅದರಲ್ಲು ನಾಗರಹಾವು ಬಿಡೋದು ಉಂಟೆ. ಪಟೇಲರು ಹತ್ತಿರ ಬಂದವರೆ ಪೊತ್ತೆಯನ್ನು ಜಾಡಿಸಿ ತಳ್ಳುವರು. ಪೊತ್ತೆ ಆಯಾ ತಪ್ಪಿ ಹಾವಿನ ಮೇಲೆ ಬೀಳುತ್ತಾನೆ. ಎಡೆ ಬಿಚ್ಚಿದ ಹಾವು ರೋಷದಿಂದ ಕಿರು ಬೆರಳಿಗೆ ಕಚ್ಚಿಬಿಡುತ್ತದೆ. ರಕ್ತ ಬಂದುದ್ದನ್ನು ಕಂಡ ಪೊತ್ತೆ ಹಾವನ್ನು ಬಟ್ಟೆ ಸೆಣೆದಂತೆ ಕಲ್ಲಿಗೆ ರಪ ರಪನೆ ಬಡಿದು ತಲೆಯನ್ನೆಲ್ಲಾ ಚಿಂದಿ ಚೂರು ಮಾಡಿ ಎಸೆದವನೆ ಕುಡುಗೋಲು ಈಸಿಕೊಂಡು ಕಚಕ್ಕನೆ ಬೆರಳು ಹಾರಿಸಿದ.

ಪಟೇಲರು ಪೊತ್ತೆಯ ಧೈರ್ಯವನ್ನು ಕಂಡು ಚಕಿತರಾದರು. "ಬಡ್ಡಿ ಹೈದ ರಕ್ತ ಅಂತಾದು, ಎಷ್ಟೇ ಆದರು ಬಸವೇಗೌಡನಿಗೆ ಜನಿಸಿದವನಲ್ಲವೆ ನೀನು, ಹಾವು ಒಡೆದಾಕಿದರೆ ಏನಾತ್ಲ ಪೊತ್ತೆ, ಅದರ ವಿಷ ಎಲ್ಲಿಗೆ ಹೋಯ್ತುದೆ ನೋಡ್ತಾಯಿರು, ನಿನ್ನ ಸೊಕ್ಕು ಎಷ್ಟೊತ್ತು ಅಂತ ನಿನಗೆ ಗೊತ್ತಾಗುತ್ತೆ" ಎಂದು ಗದರಿಸಿದರು. ಇಲ್ಲಿ ಪೊತ್ತೆ ಹಸಿರು ಔಷಧಿಗೆ ಹುಡುಕಿ ಸುಸ್ತಾಗಿ ಅರಳಿಕಟ್ಟೆ ಪ್ರವೇಶ ಮಾಡುತ್ತಾನೆ.

ಅಲ್ಲಿ ಪಟೇಲರ ಮಾತುಗಳು ಅವನನ್ನು ಅಘಾತಗೊಳಿಸುತ್ತವೆ. ತನ್ನ ಹುಟ್ಟಿನ ಬಗೆಗೆ ತನಗೆ ಅಸಹ್ಯ ಎನಿಸಿ, 'ಥೂ' ನೀನು ಬದುಕಬಾರದು ಇಷ್ಟು ದಿನ ಎಂತೆಂತ ಹಾವುಗಳನ್ನು ಹಿಡಿದೆ, ಹೊಡೆದೆ, ಎಷ್ಟು ಸಾರಿ ಅವು ಕಚ್ಚಿರಲಿಲ್ಲ. "ಹಾವಿನ ವಿಷಕ್ಕಿಂತ ಈ ನರಮನುಷ್ಯನ ವಿಷ, ಹೊಟ್ಟೆ ಉರಿ... ಓ!

ಪೊತ್ತೆಗೆ ಕಣ್ಣು ಕತ್ತಲಾಗುತ್ತಿರುವಂತೆ ಭಾಸವಾಯಿತು. ಎದ್ದು ಅಷ್ಟು ದೂರ ಹೋಗಿ ನೀರು ಕುಡಿಯಲು ತ್ರಾಣ ಇಲ್ಲದಂತಾಗಿದ್ದ ಅವನು ಹುಡುಕಿಕೊಂಡು ಹೋಗಿ ಕತ್ತರಿಸಿ ಹಾಕಿದ್ದ. ನೆಲಗಟ್ಟಿಕೊಂಡಿದ್ದ ಕಿರುಬೆರಳನ್ನು ತಂದು ಮೊದಲಿದ್ದ ಹಾಗೆ ಜೋಡಿಸಿ ಹಿಡಿದು ನೋಡಿಕೊಂಡ. ನೋಡುತ್ತ ನೋಡುತ್ತ ಪಾಳು ಬಿದ್ದು ಹಾಳಾದ ಕಲ್ಲುಕೆರೆಯ ಬೋರದೇವರ ಗುಡಿಯ ಗೋಪುರದ ಮೇಲೆ ತುಕ್ಕು ಹಿಡಿದ ಕಂಚಿನ ಕಳಸಗಳು! ಹಳೆಯ ಊರಿನ ಪಾಳು ಬಿದ್ದ ಗೋಡೆಗಳು, ಜೊಂಡು ಬೆಳೆದುಕೊಂಡ ಕೆರೆ, ಮೊಗ್ಗಲಿನಲ್ಲಿದ್ದ ಸ್ಮಶಾನ, ಕಣ್ಣಂಚಿನಲ್ಲಿ ನೀರು ತುಂಬಿಕೊಂಡು ಮರೆಯಾಗಿಬಿಟ್ಟವು. ಇಲ್ಲಿ ರಮೇಶ ಹುಲ್ಲುಕೆರೆ ಅವರು ತಮ್ಮ ಭಾಷಾ ಪ್ರೌಢಿಮೆಯಿಂದ, ಶಬ್ಧ ಪ್ರಯೋಗಗಳಿಂದ ಕಾದಂಬರಿಯಲ್ಲಿ ಕರುಳು ಕಿತ್ತಿ ಬರುವ ರೀತಿಯಲ್ಲಿ ಪಾತ್ರ ವರ್ಗ ಸನ್ನಿವೇಶವನ್ನು ನಿರ್ಮಿಸಿದ್ದಾರೆ.

ತೆಂಡೆ ಕಾದಂಬರಿಯು ಒಂದು ಮುಖ್ಯ ರಚನೆಯಾಗಿದ್ದು, ಇಂತಹ ರಚನೆಯಿಂದ ಇಡೀ ಸಮಾಜವೇ ಬದಲಾಗಬಹುದಾದ ಸನ್ನಿವೇಶ ನಿರ್ಮಾಣ ಮಾಡಿ ರಚಿಸಿರುವುದು ಹುಲ್ಲುಕೆರೆಯವರ ಜೀವನ ದೃಷ್ಟಿ ಮತ್ತು ಭಾಷಾ ಪ್ರೌಢಿಮೆಗೆ ಸಾಕ್ಷಿಯಾಗಿದೆ.

ಬೋರದೇವರ ಗುಡಿಯ ಹಕ್ಕು ಹಾಗೂ ಹೊತ್ತುವರಿ ಜಮೀನಿನ ಹಕ್ಕು ಮೂಲ ಕಾರಣವಾಗಿ ರಕ್ತ ಸಂಬಂಧಿಗಳೆ ಆದ ಕಲ್ಲುಕೆರೆ ಹಾಗೂ ದೊಡ್ಡಿಯ ಜನರ ಬದುಕು ದುರಂತದಲ್ಲಿ ಪರ್ಯಾವಸಾನಗೊಳ್ಳುವುದನ್ನು ಕಾದಂಬರಿ ಬಹಳ ಅರ್ಥವತ್ತಾಗಿ ಚಿತ್ರಿಸುತ್ತದೆ. ಕಾದಂಬರಿಯ ಕೇಂದ್ರ ವ್ಯಕ್ತಿ ಹಾಗೂ ಅವರ ಸುತ್ತ ಮುತ್ತ ಕಥೆ ತನ್ನ ತೆರೆಗಳನ್ನು ಬಿಚ್ಚಿಕೊಳ್ಳುತ್ತಾ ಹೋಗಿ ಪೊತ್ತೆ ಹಾಗೂ ಅವನ ಸಾವಿನೊಂದಿಗೆ ಅಂತ್ಯಗೊಳ್ಳುತ್ತದೆ. ಬಸವೇಗೌಡ ತನ್ನ ಸಾವು ಹತ್ತಿರವಾದಂತೆ ತನ್ನ ಮನೆಯ ನಂಬಿಕಸ್ತ ಜೀತದ ಆಳು ಪೊತ್ತೆಗೆ ಆಸ್ತಿಯಲ್ಲಿ ಪಾಲು ಬರೆದ ಸುದ್ದಿ ಊರಲೆಲ್ಲಾ ಹರಡುತ್ತದೆ.

ಈ ಕಾರಣದಿಂದಾಗಿ ಪೊತ್ತೆಯು ತನ್ನ ತಾಯಿಯ ಶೀಲವನ್ನು ಶಂಕಿಸುವ ಅನಿವಾರ್ಯತೆ ಉಂಟಾಗುತ್ತದೆ. ಇಲ್ಲಿನ ಜನ ಪೊತ್ತೆ ಬಸವೇಗೌಡನಿಗೆ ಹುಟ್ಟಿದನು ಎಂದು ಅಂಗಿಸುವುದು ಮೊದಲಾದ ಕ್ರೂರ ಮಾತುಗಳನ್ನು ಪೊತ್ತೆ ಸಹಿಸಲು ಸಾಧ್ಯವಾಗುವುದಿಲ್ಲ. ಹಾವು ಹಿಡಿಯುವುದರಲ್ಲಿ ನಿಸ್ಸೀಮನಾದ ಪೊತ್ತೆ ಒಂದು ದಿನ ನಾಗರಹಾವನ್ನು ಹಿಡಿಯುತ್ತಾನೆ . ಇದು ಬಹಳ ಸಾಂಕೇತಿಕವಾಗಿದೆ. ಹಿಡಿತ ತಪ್ಪಿ ಹಾವು ಪೊತ್ತೆಯ ಬೆರಳನ್ನು ಕಚ್ಚುತ್ತದೆ. ತಕ್ಷಣ ಬೆರಳನ್ನು ಕತ್ತರಿಸುತ್ತಾನೆ. ಆದರೆ ತನ್ನ ಬದುಕಿನ ಕ್ಷಣ ಕ್ಷಣದಲ್ಲು ತುಂಬಿರುವ, ಎದಿರಾಗುವ ಜಾತೀಯತೆ, ದರ್ಪ, ಹಂಗು ಮೊದಳಾದ ತೀಕ್ಷ್ಣ ವಿಷಯಗಳ ಮುಂದೆ ನಾಗರಹಾವಿನ ವಿಷ ತಂಪಾಗಿಯೆ ಕಾಣುತ್ತದೆ. ಆದ್ದರಿಂದ "ಹಂಗಿನ ಅಮೃತಕ್ಕಿಂತ ಸ್ವಂತದ ವಿಷ ಲೇಸು" ಎಂಬಂತೆ ವಿಷಪೂರಿತ ಬೆರಳನ್ನು ಪುನಃ ತನ್ನ ಅಸ್ತಕ್ಕೆ ಜೋಡಿಸಿಕೊಂಡು ಸಾವನ್ನು ಅಪ್ಪುತ್ತಾನೆ. ಹಾಗೆಯೆ ಕಲ್ಲುಕೆರೆ ಹಾಗೂ ದೊಡ್ಡಿಯ ರಕ್ತ ಸಂಬಂಧಿಗಳ ನಡುವೆಯ ಸಂಘರ್ಷಕ್ಕೆ ಬೋರದೇವರ

ಗುಡಿಯೇ ರಣರಂಗವಾಗುದು ಶೋಚನೀಯ ಸಂಗತಿ. ಹೀಗೆ ಅನೇಕ ರೋಮಾಂಚನಗೊಳಿಸುವ ಸಂಗತಿಗಳು ಹಾಗೂ ಘಟನೆಗಳಿಂದ ತುಂಬಿರುವ ಕಾದಂಬರಿ ಸಂಕೀರ್ಣತೆಯನ್ನು ಏರ್ಪಡಿಸಿಕೊಂಡಿದೆ.

ಶ್ರೀಯುತರು ಕಾದಂಬರಿಯಲ್ಲಿ ಗ್ರಾಮೀಣ ಭಾಷೆಯನ್ನು ಅರ್ಥವತ್ತಾಗಿ ಬಳಸಿದ್ದಾರೆ. ನುಡಿಗಟ್ಟುಗಳು, ಬೈಗುಳಗಳು, ಗಾದೆಗಳು, ಸಜೀವ ಮಣ್ಣಿನ ವಾಸನೆ ಎಲ್ಲವು ಕಾದಂಬರಿಯಲ್ಲಿ ಹೊರಸೂಸುತ್ತವೆ. ಮಂಡ್ಯ ಜಿಲ್ಲೆಯ ಹಳ್ಳಿಗಾಡಿನ ಚಿತ್ರಣವನ್ನು ವ್ಯವಸ್ಥಿತವಾಗಿ ರೂಪಿಸಿದ್ದಾರೆ.

ಒಟ್ಟಾರೆ ಕಾದಂಬರಿಯ ಪಾತ್ರಗಳು ತಮ್ಮ ಅಸ್ತಿತ್ವವನ್ನು ಬಹಳ ಸುವ್ಯವಸ್ಥಿತವಾಗಿ ರೂಪಿಸಿಕೊಂಡು ಇಡೀ ಕಾದಂಬರಿಗೆ ಪುಷ್ಟಿ ನೀಡುವ ಕಾರ್ಯವನ್ನು ಕೈಗೊಂಡಿದ್ದಾರೆ.

ಶ್ರೀ ರಮೇಶ ಹುಲ್ಲುಕೆರೆಯವರ ಮತ್ತೊಂದು ಕಾದಂಬರಿಯಾದ ಕಲ್ಲುಮಲೆ ಎಂಬ ಕಾದಂಬರಿಯು ಇನ್ನೂ ಅಪ್ರಕಟಿತವಾಗಿದ್ದು ಇದರ ಕಲ್ಪನೆಯನ್ನು ನಾವು ಅವಲೋಕಿಸಿದಾಗ ಇದರ ಕಲ್ಪನೆಯೆ ಅದ್ಭುತವಾಗಿದೆ. ಇಲ್ಲಿ ದೇವರ ಹೆಸರಿನಲ್ಲಿ ನಡೆಯುವ ಅನೇಕ ವಿಚಾರಧಾರೆಗಳು ಪ್ರಸ್ತುತ ಎನಿಸುತ್ತದೆ.

ಬಯಲು ಸೀಮೆಯಲ್ಲಿ ಬೆಳಗಾಗುವುದು ಒಂದು ಮೋಜಿನ ಸಂಗತಿ. ಪೂರ್ವ ರಂಗ ಸ್ಥಳದಲ್ಲಿ ಕಂಡ ಕೆಂಪು ಚೆಲ್ಲಾಡಿ ನೆತ್ತರು ಅಂಟಿಕೊಂಡಂತೆ ಕಾವೇರಿ ಸರ್ಚ್ ಲೈಟ್ ಬೆಳಕಿನ ಕೋಲಿನಂತೆ ಹಟ್ಟಿ ಹಟ್ಟಿಗೂ ಹರಿದು ಆಟ ಶುರುವಾಯಿತು. ಆತಂಕ ತಟ್ಟಿ ಹೆಚ್ಚರಿಸಿದಂತೆ ಬೆಳಗಾಗುತ್ತದೆ.

ಆ ಸೂರ್ಯ ಕಣ್ಣು ಬಿಟ್ಟ ಲಾಗಾಯಿತಿನಿಂದ ನೋಡುತ್ತ ಬಂದ ಸೋಜಿಗದ ಸಂಗತಿ ಎಂದರೆ ಕೂರಿಸಿಟ್ಟ ಕರಿಕಲ್ಲು ಬಂಡೆಗಳು, ಅದರ ಬುಡದಲ್ಲಿ ವಾಸರ ಹಿಡಿದು ಭೂಮಿಗೆ ಆತುಕೊಂಡಂತೆ ಹಟ್ಟಿಗಳು, ಕೂನುಗಲ್ಲು ಅಂತಲೇ ಸುತ್ತೆಲ್ಲಾ ಜನಕ್ಕೂ ಹೆಸರುವಾಸಿಯಾಗಿ ಬಿಟ್ಟಿದೆ! ಇಂತಹ ಕರಿಕಲ್ಲ ಬಂಡೆಗಳುಗು, ಬರೀ ಮೈ ಮನುಷ್ಯರಿಗೂ ಯಾವ ಋಣಾನುಬಂಧವೊ ಒಂದಕ್ಕೊಂದು ಸಂಬಂಧದ ಬೇರು ಬಿಟ್ಟು ಬೆಟ್ಟ ಯಾವುದು? ಹಟ್ಟಿ ಯಾವುದು? ಅಂತ ತಡಕುವುದು ಕಷ್ಟವಾಗಿದೆ. ಈ ಕರಿನೆರಳ ಕೂನುಗಲ್ಲಿನ ಬದುಕು ಕಣ್ಣು ಮಿಟುಕದ ಹಾಗೆ ಕನಸು. ಮೂಡಣ ಕಣ್ಣಂಚಿನಲ್ಲಿ ಕಂಡ ಕೆಂಡ ಕೆಂಪು ರಗ ರಗ ಹೊಳೆದು ಒಗೆಯಾಗಿ ಕವಿಯುತ್ತ ಕಪ್ಪು ಮೋಡವಾಗಿ ಹೆಪ್ಪುಗಟ್ಟುತ್ತ ಕೂನಗಲ್ಲಿನ ಮೇಲೆ ಕವುಚಿಕೊಂಡು ಹೊಲಗೇರಿಯ ಸಿದ್ಧನ ಮುಖದ ಮೇಲೆ ಎಷ್ಟು ತೊಳೆದರು ಬೆಳಗದ ಅಮಾಸೆ ಅಂಟಿಕೊಂಡಂತೆ ದುಃಖದ ಗೂಡು ಕಟ್ಟಿತು. ನೋಡು ನೋಡುತ್ತಿದ್ದಂತೆ - ಸಿದ್ಧಿ ದಿಗಿಲುಗೊಂಡು. ಬದುಕಿನ ರಿವಾಜು ಎನ್ನುವುದೇ ಹೀಗೆ. ಸುಖ-ದುಃಖ, ಸೋಲು-ಸವಾಲು, ಹೋರಾಟ-ಹೊಂದಾಣಿಕೆ, ಹುಟ್ಟು-ಸಾವುಗಳ ಗೆರೆ ಅಂಚಿನಲ್ಲಿ ಮಿಂಚಿ ಮಾಹೆ ಮುಸಿಕಿಬಿಡುತ್ತದೆ.

ಸಿದ್ಧನ ಕಣ್ಣ ಮುಂದೆ ಪಾಪ ಪ್ರಜ್ಞೆ ರೀಲು ಬಿಚ್ಚಿಕೊಂಡಿತು. ಬಡವರಿಗೆ ಹೆಂಡತಿಯೇ
ೂಮಿ, ಮಕ್ಕಲೇ ಸಂಪತ್ತು ಎಂದು ಸಿದ್ಧನು ತನ್ನ ಹೆಂಡತಿ ಸಿದ್ಧಿಗೆ ಹೇಳದಾಗ ಏನಂದೆ?
ಂಡತಿ ಮಕ್ಕಳು ಸಾಕೊ ತ್ರಾಣ ಇಲ್ಲದ ನೀನು ಹೇಳುವ ಮಾತ ಇದು? ಚಂಡಿಯಾದಳು ಸಿದ್ಧನ
ಂಡತಿ. "ಈ ಭೂಮಿ ನೀನು, ನಾನು ನೇಗಿಲು, ಉಳುತ್ತೀನಿ ನಾನು ಗೆವರ ಸುರಿಸಿ, ತೆಗಿತೀನಿ
ಳೆಯ ಮಕ್ಕಳ ಬೆಳೆಯ, ನನಗೇನು ಕಡಿಮೆ, ನಾನೇ ಈ ಭೂಮಿಯ ಒಡೆಯ".

ಕೂನುಗಲ್ಲಿನ ರಾಜಬೀದಿಗಳೆಂದರೆ ಹರಿದ ಎಕ್ಕಡದ ಚಿಂದಿ ಚೂರು! ನಾಲ್ಕು ಹನಿ
ುಗಿಲು ಕಣ್ಣೀರಿಟ್ಟರೆ ಉಂಟು, ಹಸಿರು. ಕತ್ತಿ ತಿನ್ನುವ ಹಸಿವು! ಅನ್ನ ಅಂತ ಕಾಣಬೇಕದರೆ
ೇರಿಗೆ ಕಾಲರ ಮಾರಿ ತಗುಲಬೇಕು. ತಂಪು ತೋರಲು ಹಬ್ಬಕ್ಕೆ ಹಣಿ ಮಾಡಬೇಕು. ಅಂದರೆ
ಂಗಳಾನುಹಟ್ಟಲೆ ಹಿಡಿಯುವ ಊರೊಟ್ಟಿನ ಕೆಲಸ. ಪಟೇಲರು ಮನಸ್ಸು ಮಾಡಿದರೆ ಅದು
ಾಧ್ಯ. ನಿಂತು ಮಾಡಬೇಕಾದವರು ಅವರೇ ಅಲ್ಲವೆ? ಮಾರಿ ಪರಕ್ಕೆ ಪಲ್ಲ ಅಕ್ಕಿ ಬೇಯಿಸಿ
ೂರಿಗೆಲ್ಲಾ ಪ್ರಸಾದ ಹಾಕುವ ತಾಕತ್ತು ಇನ್ನಾರಿಗಿದೆ? ಕೂನುಗಲ್ಲಿನ ವೈಭೋಗವೇ ಅಂತದ್ದು.
ುಗಳ ನುಂಗುವ ಮಕ್ಕಳು, ಮುಗುಳುನಗು ಕಾಣದ ಮುಖಗಳು. ಹಸಿವು ತಾಳಲಾರದೇ
ೂತಾಳೆ, ದಿಂಡು ತಿನ್ನುವ ಬರಗಾಲದಲ್ಲಿ ಸಿದ್ಧನ ಹೆಂಡತಿ ಬಸುರಾದುದ ಕಂಡು ಊರಿಗೇ
ೂರೇ ಸೋಜಿಗಗೊಂಡಿತ್ತು. ದೊಳ್ಳ ತೋರಿಸಿದ ಜಾಗದಲ್ಲಿ ಸಿದ್ಧ ಕೌರುತ್ತಿದ್ದ ಕೊಳ್ಳ ಇಟ್ಟ. ನೀರಿ
ೆರಳಗೆ ಇದೇ ಪರಮಾಸಿ ಜಾಗ ಎಂದು ಚಟ್ಟ ಇಳುಕಿದರು. ಕಿತ್ತುಕೊಂಡ ಬೆವರ
ೊರೆಸಿಕೊಳ್ಳುತ್ತ ತಮಟೆ, ಓಲಗದವರು ಸದ್ದು ನಿಲ್ಲಿಸಿ ಕೆಳಕಡೆ ಕುಳತರು. ಸುತ್ತ ನೆತ್ತಿ ಎತ್ತರಕ್ಕೆ
ತ್ತ ನೋಡಿದರತ್ತ ಕಣ್ಣಳತೆಗೆ ಕರಿಕಲ್ಲ ಹೆಂಬಂಡೆಗಳು, ಚೋಟುದ್ದ ಕಾಣುವ ನರಮನುಷ್ಯನಿಗೆ
ಮುಖಾಮುಖಿಯಾದವು.

'ಹೊಲಗೇರಿಯ ಹೆಣ' ಅಂತ ಕುಲದಲ್ಲಿ ದೊಡ್ಡವರು ದೂರದಲ್ಲೇ ಕುಳತರು.
ಹೊಲಗೇರಿಯಲ್ಲಿ ಸ್ವಲ್ಪ ಬಲಿತವರು ನಮಗೇಕೆ ಉಸಾಬರಿ. ಆತ ನೆಲದಲ್ಲೇ ಕೂತದ್ದ ಕಂಡ
ದೊಳ್ಳ ಕಟಕಿಯಾಡಿ ತಿವಿದ. ಇಂತಹ ಸಮತದಲ್ಲಿ ವಾಜರ ಅಪ್ಪಾಜಿಯನ್ನು ಮರೆತವರುಂಟೆ.
ಕುಲ ಮತ್ತು ಕುಳ ಗೂನುಗಲ್ಲಿನಲ್ಲಿ ತಳಕುಂತ ಪಾತಾಳ ಗರಡಿಯಂತೆ ಸೆಳೆಯಲಾರದಂತಹ
ಶಕ್ತಿಯಾಗಿ ಬೇರು ಬಿಟ್ಟಿದೆ. ಕುಲದಲ್ಲಿ ಚಿಕ್ಕವನೇ ಆದರು ಕುಲದಲ್ಲಿ ಅಪ್ಪಾಜಿ ದೊಡ್ಡವನೆ.
"ಕುಲವ್ಯಾವುದಯ್ಯ ನನ್ನ ಕುಲುಮೆಗೆ ಕುಲ ಯಾವುದು"? ಅಂತ ಕಿರುಕಲು ಧ್ವನಿಯಲ್ಲಿ ತಿದಿ
ಹಿತ್ತಿದಂತೆ ಉಸಿರು ಬಿಡುತ್ತ ಕುಲುಮೆಯ ಮುಂದೆ ಕಂತವರನ್ನು ರಂಜಿಸುವಾಗ ಅಪ್ಪಾಜಿ ಥೇಟ್
ಅಣ್ಣನೇ ಆಗಿ ಬಿಡುತ್ತಿದ್ದ.

ಹಾಗಂತ ಅಪ್ಪಾಜಿ ಜಾತಿ ಬಿಟ್ಟವನ್ನಲ್ಲ. ಸಾಕ್ಷಿಗೆ ಜನಿವಾರ ಇದೆ. ಆದ್ದರಿಂದ ಹೊಲೆಯರ
ಹೆಣದಲ್ಲಿ ಬಿಡಿಗಾಸು ಮುಟ್ಟುವುದಿಲ್ಲ ಎಂಬ ವಿಶ್ವಾಸ. ಅಗಸರ ಬ್ಯಾತನಿಗು, ದೊಳ್ಳನಿಗು
ಇದ್ದುದರಿಂದಲೇ ಅವರು ಗೆಲುವಿನಿಂದ ಇದ್ದರು. ಇಂತಹ ಕಲೆ ನನ್ನ ತಲೆಗೆ ಹೋಗಿಬಿಡುತ್ತೆ

ಅನಿಸುತ್ತೆ ಕಾಣಯ್ಯ. ಯಾವುದೇ ಕಸುಬೇ ಆಗಲಿ ಒಂದು ಹೊತ್ತು ಗಂಜಿಹೂ ಗತಿ ಕಾಣಿಸದೆ ಹೋದ ಮೇಲೆ ಆ ಕಸುಬು ಮಾಡಿ ಏನೂ ಪ್ರಯೋಜನ. ನನಗೂ ಇಂತದ್ದೆ ಬೇಕು ಅಂತ ಕೇಳ ಮಾಡಿಸಿಕೊಳ್ಳಲು ಯಾರು ಇಲ್ಲ.

ಅರೆ? ಥುತ್, ಬುಡ್ತು ಅನ್ನು ಪ್ರಾಣ ಒಂದಿದ್ದರೆ ಏನಾದರೂ ಮಾಡಬಹುದು. ನೀನು ವರಮಾಸಿ ಚಟ್ಟ ಕಟ್ಟುತ್ತೀಯೆ ಅಂತ ಬದುಕಿದಂಗೆ ಕೇಳ ಮಾಡಿಸಿಕೊಳ್ಳುವ ಗಿರಾಕಿ ಬೇಕಾ, ಸ್ವಲ್ಪ ತಡಕೊ ಯಾಕೆ ಅವಸರ ಮಾಡುತ್ತೀಯೆ, ನೋಡು ಈ ಗುದ್ದದ ಮೇಲಿನ ಬಿಳಿ ಬಟ್ಟೆ ತರೋಕೆ ಕಂಡೋರ ಕಾಲು ಕಟ್ಟಿ ಸಾಲ ಮಾಡಿ ತಂದೀವ್ನಿ. ಮತ್ತೆ ನಿನ್ನ ಚಟ್ಟದ ಮೇಲೆ ಕೂರೊ ಆಸೆಗೆ ಯಾರಾದ್ರು ಗೊಟುಕ್ ಅಂದ್ರೆ ಮತ್ತೆ ಸಾಲ ಮಾಡಲಾರೆ ಎಂದ ದೊಳ್ಳ ಸಾವಿನ ಬಗ್ಗೆ ಬಿಗಿಲುಗೊಂಡ.

ಊರಿಗೆ ಉಪಕಾರ ಮಾಡೋದು ಒಂದೇ ಹೆಣಕ್ಕೆ ಸಿಂಗಾರ ಮಾಡೋದು ಒಂದೇ. ಹೊಳೆಯಲ್ಲಿ ಹುಣಸೆಹಣ್ಣು ತೇಯ್ದಂಗೆ. ಕರಿಯ ಚಕ್ಕಳದೊಳಗೆ ಜೀವ ಹಿಡಿದುಕೊಂಡಿದ್ದ ಐದು ಮಂದಿ ದಾಸಯ್ಯಗಳು ಹೆಗಲ ಮೇಲೆ ಹಿರುಕಿಕೊಂಡಿದ್ದ ದೇವರಿಗೆ ಕೆಂಪು ಚೌಕ ಮರೆ ಮಾಡಿಕೊಂಡು ಬಂದವರು ತಮ್ಮ ದೇವರುಗಳನ್ನು ಕೆಳಗೆ ಇಳಸಿ ಹರಿವಾಣ, ನವಿಲುಗರಿ, ಬೆತ್ತ, ಸಿಂಗಲೀಕ, ತಿರುಪತಿಸ್ವಾಮಿಯನ್ನು ಬಿಚ್ಚಿಟ್ಟರು. ಗುದ್ದದ ಪೂಜೆಗೆಂದೆ ನೆಂಟರಿಷ್ಟರು ಬಗೆ ಬಗೆಯ ತಿಂಡಿ ತಿನಿಸುಗಳನ್ನು ತಂದು ಹಿಡುತ್ತ ಹೋದಂತೆ ದೊಳ್ಳ ಚಟ್ಟವನ್ನು ಕಿತ್ತು ಹಾಕಿ ನಾಲ್ಕು ಜನರ ಆಸರೆಯಿಂದ ಅನಾಮತ್ತು ತುಂಬಿದ ಬಸುರಿಯನ್ನು ಚಕ್ಕ ಪಕ್ಕಲೆ ಹಾಕಿದಂತೆ ಕೂರಿಸಿದ ಮೇಲೆ ದಾಸಯ್ಯಗಳು ಹೆಣಕ್ಕೆ ಬಿದ್ದ ಹದ್ದು ಕಾಗೆಗಳಂತೆ ಜಾಗಟೆ ಬಾರಿಸಿ, ಬಾಂಕಿ ಊದಿ, ಪೂಜೆ ಮುಗಿಸಿ, ಗುದ್ದದ ಮೇಲಿನ ಪ್ರಸಾದವನ್ನು ತಿಂದು ತೇಗಿ ಹೆಂಡಕ್ಕೆ ಪಟೇಲರನ್ನು ಪೀಡಿಸಿ ಕಾಸು ಗಿಟಿಸಿಕೊಂಡು ಖಾಲಿಯಾದರು.

ಕಲ್ಲುಮಲೆ ಪೂಜೆ ನಿರುಕು ಸಿದ್ಧನದಾಗಿತ್ತು. ಅವರ ಅಪ್ಪ ದೊಡ್ಡ ಸಿದ್ಧ. ನರಪೂಜೆ ಅಂದರೇನು? ಸಾಮಾನ್ಯವಾ. ಅದೇನು ಐನೋರ ಪುಳಿಯೊಗರೆ ಪೂಜೆ ಅನ್ಕೊಂಡ್ರಾ? ಎಂಟೆದೆ ಗುಂಡಿಗೆ ಬೇಕು ಸಂತಾನ ಪೂಜೆ ಮಾಡೋಕೆ. ಸ್ವಲ್ಪ ಹೆಚ್ಚು ಕಮ್ಮಿ ಆದರು ಪೂಜೆ ಮಾಡ್ತೋನ ಹೆಣ ಬಿದ್ದು ಹೋಗುತ್ತದೆ. ಸೂತಕದ ಮನೆಯವರು ಕಲ್ಲಮಲೆ ಪೂಜೆ ಮಾಡುವಂತಿಲ್ಲ ಎನ್ನುವ ಸಮಸ್ಯೆ ಇದುವರೆಗೆ ಸಂಬವಿಸಿದ್ದೇ ಅಪರೂಪ. ಹೊಲೆಯರ ಹೆಣಕ್ಕೆ ಕಲ್ಲುಮಲೆ ಪೂಜೆ ಮಾಡಲು ಮೇಲು ಜಾತಿಯವರು ಒಪ್ಪವುದಿಲ್ಲ. ಹರಿಜನರಿಗೆ ಮುಂದೆ ಬರುವ ಧೈರ್ಯವಿಲ್ಲ. ಇದರಿಂದಾಗಿ ಪಟೇಲರು ಈ ಕೆಲಸಕ್ಕೆ ದೊಳ್ಳನೆ ಸರಿ ಎಂದು ಪ್ರೋತ್ಸಾಹಿಸಿದರು. ದೊಳ್ಳನಿಗೆ ಖುಷಿಯಾಯಿತು. ದೇವರು ಸುರಿಸಿದ ಪೂಜೆ ಕಾಸು ಜೇಬು ತುಂಬುವ ಹಿಗ್ಗು ಬರಗಾಲದ ಸುಗ್ಗಿಯಾಯಿತು. ಹತ್ತು ರೂಪಾಯಿ ದುಡಿಯೋಕೆ ಒಂದು ವಾರ ಕುಲುಮೆ ಮುಂದೆ ಬೆವರು ಸುರಿಸಬೇಕು. ದೊಳ್ಳಪ್ಪನ

ವೃಷ್ಟ ಯಾರಿಗೂ ಇಲ್ಲ ಎಂದು ಚಾಕು ಚೂರಿಯನ್ನು ಹೊರಗೆ ತೆಗೆದು ಪಳಗುಟ್ಟಿಸಿ ಶವದ ಮುಂದೆ ಇಡುತ್ತಾರೆ.

ಈ ಮುಂಡೆ ಮಗಳು ಸಿದ್ಧನ ಕಟ್ಟಿಕೊಳ್ಳೋದಕ್ಕೆ ಅದೇನು ಕರ್ಮ ಮಾಡಿದಳೊ. ಬದುಕಿದ್ದಾಗಲಂತು ಅವಳವನ್ನು ಬವಣಿಸಲಿಲ್ಲ. ಸತ್ತಾಗಲಾದರು ಗೌರವ ಕೊಡುತ್ತಾನೆಂದರೆ ಇವನು ಬದುಕುವುದನ್ನೇ ನೋಡಿಕೊಂಡ. ಈ ರೀತಿಯಾಗಿ ಹೇಳಿಕೊಂಡು ವಾಸನೆಯನ್ನು ಲೆಕ್ಕಿಸದೆ ಹೆಣವನ್ನು ಎತ್ತಿ ಕೂರಿಸಿದ ದೊಳ್ಳ ವಾತರಿಸಿಕೊಂಡು ಕಲ್ಲುಗಳು ಜಾರದ ಹಾಗೆ ಮೇಲೆ ಇರುತ್ತಾನೆ. ಈ ಮೇಲಿನ ವಿಚಾರವನ್ನು ನಾವು ಕೂಲಂಕುಶವಾಗಿ ಪರಿಶೀಲಿಸಿದಾಗ ಕಲ್ಲಿಮಲೆ ಕಾದಂಬರಿಯು ತನ್ನ ಹೆಸರೆ ಸೂಚಿಸುವಂತೆ ಕಲ್ಲುಗಳಿಂದ ಕೂಡಿದ ಬೆಟ್ಟ ಎಂದಾಗುತ್ತದೆ. ಇಲ್ಲಿ ಮಲೆ ಮಾದೇಶ್ವರನ ಭಕ್ತರು ವರ್ಷಕ್ಕೊಮ್ಮೆ ಮಾದೇಶ್ವರನ ಬೆಟ್ಟಕ್ಕೆ ಯಾತ್ರೆ ಹೊರಡುತ್ತಾರೆ. ಇದು ಸಾಮಾನ್ಯವಾಗಿತ್ತು.

ಈಗಿನಂತೆ ಆಗ ಯಾವ ವಾಹನ ಸೌಕರ್ಯವೂ ಇರಲಿಲ್ಲ. ಉದ್ದಕ್ಕೂ ದಟ್ಟವದ ಖಾಡಿನಲ್ಲಿ ಪ್ರಯಾಣ ಮಾಡಬೇಕಾದ ಕಾಲ ಅದು. ಕಾಡು ಎಂದ ಮೇಲೆ ಅಲ್ಲಿ ದುಷ್ಟರ, ದುಷ್ಟ ಕಾಡು ಪ್ರಾಣಿಗಳ ಹಾವಳಿ ಇದ್ದೇ ಇರುತ್ತದೆ. ಈ ಕಾರಣದಿಂದಾಗಿ ಕಾಲ್ನಡಿಗೆಯಲ್ಲೇ ಯಾತ್ರೆ ಹೋಗುವ ಭಕ್ತರು ಸಾಮಾನ್ಯವಾಗಿ ತಂಡ ತಂಡವಾಗಿ ಗುಂಪುಗಳಲ್ಲೆ ಪ್ರಯಾಣ ಮಾಡುತ್ತಿದ್ದರು. ಅದು ಮೊದಲೇ ಕಾಡು ದಾರಿ. ಅಲ್ಲಿ ಹೆಚ್ಚು ನೆರಳೆ ಇತ್ತು ಹೊರತು ನೀರಿರಲಿಲ್ಲ. ಇಷ್ಟು ವಿಚಾರವನ್ನು ಏಕೆ ತಿಳಿಸಿದ್ದಾರೆ ಎಂದರೆ ರಮೇಶ ಹುಲ್ಲುಕೆರೆಯವರು ಮುಂದಾಲೋಚನಾಶಕ್ತಿ ಉಳ್ಳವರು. ಅಲ್ಲಿನ ದುಸ್ಥಿತಿಯನ್ನು ಗಮನಿಸಿ ಅದಕ್ಕೆ ಪೂರಕವಾದ ರೀತಿಯಲ್ಲಿ ಕಾದಂಬರಿ ನಿರ್ಮಿಸಿದ್ದಾರೆ. ಮಾದೇಶ್ವರಬೆಟ್ಟಕ್ಕೆ ಹೋಗುವ ದಾರಿಯಲ್ಲಿ ಯಾರದರೂ ಹಸುನೀಗಿದರೆ ಏನು ಮಾಡುವುದು ಎಂದು ಹೊಳೆದು ಗುಂಡಿ ತೋಡಿ ಹೂಳಲು ಸಮಯವಿಲ್ಲದೆ ಸಲಕರಣೆಗಳಿಲ್ಲದೆ ಇದ್ದ ಸಮಯದಲ್ಲಿ ಜನರಿಗೆ ಹೊಳೆದದ್ದು ಈ "ಕಲ್ಲುಮಲೆ" ಎಂಬ ಕಲ್ಪನೆ. ಸತ್ತವನನ್ನು ಊರುಗೋಲಿನ ಆಸರೆಯಲ್ಲಿ ಕೂರಿಸಿ ನಾಲ್ಕಾರು ಕಲ್ಲುಗಳನ್ನು ಜೋಡಿಸಿ ಆನಂತರ ಬರುವ ತಂಡಗಳ ಪ್ರತಿ ಸದಸ್ಯರು ಹೆಣದ ಮೇಲೆ ಕಲ್ಲು ಹಾಕುವುದು. ಈ ಕಲ್ಲಿನ ರಾಶಿಯಿಂದಲೆ ಹೆಣ ಮುಚ್ಚಿ ಹೋಗುತ್ತಿತ್ತು. ಆ ರಾಶಿಯು ಬೆಟ್ಟದಾಕಾರ ಪಡೆಯುತ್ತಿದ್ದರಿಂದ ಅದನ್ನು "ಕಲ್ಲುಮಲೆ" ಎಂಬ ಹೆಸರಿನಿಂದ ಜನರು ಗುರುತಿಸುತ್ತ ಬಂದರು. ಕಲ್ಲುಮಲೆ ಕಂಡಿದೆಂದರೆ ಅದು ಸಮಾದಿ ಅಲ್ಲದೆ ಬೇರೆ ಅಲ್ಲ. ಇದು ರಮೇಶ ಹುಲ್ಲುಕೆರೆಯವರ ಗಮನಕ್ಕೆ ಬಂದು ಕಲ್ಲುಮಲೆ ಆಚರಣೆಯನ್ನು ಹಿನ್ನೆಲೆಯಲ್ಲಿಟ್ಟುಕೊಂಡು ಒಂದು ಹಳ್ಳಿಯ ಬದುಕಿನಲ್ಲಿ ಘಟಿಸಿದ ಅನಿಷ್ಟ ಪರಂಪರೆಯಿಂದಗಿ ದ್ವೇಷ ಅಸೂಯೆಗಳ ಬಿರುಗಾಳಿ ಎದ್ದು ಇಡೀ ಹಳ್ಳಿಯೆ ಒಂದು ಕಲ್ಲುಮಲೆಯಾಗಿ ಮಾರ್ಪಡುವ ಅಪರೂಪದ ಚಿತ್ರಣವನ್ನು ಕಾದಂಬರಿ ಒಳಗೊಂಡಿದೆ. ಹೀಗೆ

ಮೇಶ ಹುಲ್ಲುಕೆರೆಯವರ ಕಾದಂಬರಿ ರಚನೆಯನ್ನು ನಾವು ಬಹಳ ಉತ್ಸುಕತೆಯಿಂದ ಅಭ್ಯಾಸ
ಾಡಿ ಅನಿಸಿರುವ ವಿಚಾರವನ್ನು ಚರ್ಚಿಸಲು ಅವಕಾಶವಾಗಿದೆ.

**ಅಡಿ ಟಿಪ್ಪಣಿ:**

ಹೊನ್ನಾರು ಮಾಲೆ, ಸಾಹಿತ್ಯ ಶೋಧನಾ ಡಾ||ಹೆಚ್.ಜೆ.ಲಕ್ಕಪ್ಪಗೌಡ

(ಹಂಪಿ ವಿ.ವಿ.ನಿಲಯ)

ಇವರ ಕನ್ನಡ ಕಾದಂಬರಿಗಳ ಇಪ್ಪತ್ತೈದು ವರ್ಷ. ೧೯೪೭ – ಪುಟ ಸಂಖ್ಯೆ ೧೧೫ –

೧೪೪ರವರೆಗು.

ಡಾ||ಡಿ.ಆರ್.ನಾಗರಾಜು ಕೃತಿ ವಿಮರ್ಶಾ ಲೇಖನಗಳ ಸಂಕಲನ.

ನವ ಮೌಖಿಕತೆ ಮತ್ತು ಕಾವ್ಯ. ಪುಟ ಸಂಖ್ಯೆ ೨೨೦

ಕನ್ನಡದ ಮೊದಲ ಕಾದಂಬರಿಗಳಲ್ಲಿ ಆದರ್ಶ ಮತ್ತು ವಾಸ್ತವ ೩೬೭

"ತೆಂಡೆ" ಕಾದಂಬರಿಯಲ್ಲಿನ ಬರವಣಿಗೆ ಶ್ರೀ ರಮೇಶ ಹುಲ್ಲುಕೆರೆಯವರು

ವೀಕ್ಷಕ ವಾರ ಪತ್ರಿಕೆಯ ಲೇಖನ – ಗೌಡರ ಅಸ್ತಿತ್ವ ೧೯೭೩

# ಅಧ್ಯಾಯ – ೫

## ಶ್ರೀ ರಮೇಶ ಹುಲ್ಲುಕೆರೆಯವರ ಸಣ್ಣಕತೆಗಳು

ಶ್ರೀಯುತರು ವಿಜ್ಞಾನ ವಿದ್ಯಾರ್ಥಿಯಾಗಿದ್ದು ಅವರು ಕನ್ನಡದ ವಿಶೇಷ ಆಸಕ್ತಿಯನ್ನು ಬೆಳೆಸಿಕೊಂಡು ಕಥಾ ರಚನೆಯಲ್ಲಿ ತೊಡಗಿ ಸಾಹಿತ್ಯ ಕ್ಷೇತ್ರಕ್ಕೆ, ಪತ್ರಿಕಾ ಕ್ಷೇತ್ರಕ್ಕೆ ತಮ್ಮನ್ನು ಸಂಪೂರ್ಣವಾಗಿ ಅರ್ಪಿಸಿದರು. ರಮೇಶ ಹುಲ್ಲುಕೆರೆಯವರು ೧೯೭೮ ರಿಂದಲೂ ಕತೆಗಳನ್ನು ಬರೆಯುತ್ತ ಬಂದವರು. ತಮ್ಮ ಅಪೂರ್ವ ಕೃತಿಗಳ ಮೂಲಕ ನಾಡಿನ ಖ್ಯಾತ ಕತೆಗಾರರಾಗಿರುವ ರಮೇಶ ಹುಲ್ಲುಕೆರೆಯವರು ಖ್ಯಾತ ಕತೆಗಾರ ಡಾ॥ ಬೆಸಗರಹಳ್ಳಿ ರಾಮಣ್ಣನವರ ಸಮಕಾಲೀನರು. ಬದಲಾಗುತ್ತಿರುವ ಸಮಾಜವನ್ನು ಅತ್ಯಂತ ಸೂಕ್ಷ್ಮವಾಗಿ ಗಮನಿಸುವ ಸಂವೇದನಾಶೀಲರು. ಒಂದರ್ಥದಲ್ಲಿ ಡಾ॥ಬೆಸಗರಹಳ್ಳಿ ರಾಮಣ್ಣನವರಿಗಿಂತ ಭಿನ್ನವಾಗಿ ಗ್ರಾಮೀಣ ಪರಿಸರವನ್ನು ಅರ್ಥವತ್ತಾಗಿ ಕಟ್ಟಿಕೊಟ್ಟಿದ್ದಾರೆ ಎಂದರೆ ಅತಿಶಯೋಕ್ತಿಯಲ್ಲ.

ಮಂಡ್ಯದ ಭಾಷೆ ಗಂಡು ಮೆಟ್ಟಿದ ಭಾಷೆ. ಅದರ ಶಬ್ದಗಳು ಮೇಲು ನೋಟಕ್ಕೆ ಕಠಿಣವೆನಿಸಿದರು ಅಂತರಾಳದಲ್ಲಿ ಸುಮಧುರ ಹಾಗೂ ಅತ್ಯಂತ ಪರಿಣಾಮಕಾರಿ. ಅಂತೆಯೆ ರಮೇಶ ಹುಲ್ಲುಕೆರೆಯವರ ಕೃತಿಗಳು ಒಂದು ಪ್ರದೇಶವನ್ನು ಪರಿವಯಿಸುತ್ತ ನಾಡಿನಾದ್ಯಂತ ಪಸರಿಸುತ್ತದೆ. ಗ್ರಾಮೀಣ ಪ್ರದೇಶದ ಬದುಕು ಜೀವನ ವ್ಯವಸ್ಥೆಯು ಬಹಳ ಸಂಕೀರ್ಣವಾದುದು. ಅದನ್ನು ಪ್ರವೇಶಿಸುವುದು ಕಗ್ಗತ್ತಲೆಯ ಅರಣ್ಯವನ್ನು ಹೊಕ್ಕುವ ಸಾಹಸವಷ್ಟೆ. ಪೂರ್ವ ಸಿದ್ಧತೆಯಿಲ್ಲದೆ ಸಾರಸಗಟಾಗಿ ಹೊಳ ಹೊಕ್ಕುವುದು ಸಮಂಜಸವಲ್ಲ. ಅಂತೆಯೆ ರಮೇಶ ಹುಲ್ಲುಕೆರೆಯವರ ಕೃತಿಗಳು ಕೂಡ ಶ್ರೀಯುತರ ತೆಂಡೆ ಕಾದಂಬರಿ, ಸಾಕ್ಷಿ ಕಥಾ ಸಂಕಲನ ಮುಂತಾದವುಗಳು ಅದ್ಭುತ ರಚನೆಯಾಗಿದ್ದು, ಓದುಗರ ಮನಸ್ಸು ಅತ್ಯಂತ ವೇಗವಾಗಿ, ಸರಳವಾಗಿ ಪ್ರವೇಶ ಮಾಡಿ ಬದುಕುವ ಶೈಲಿಯನ್ನು ಬದಲಿಸುತ್ತದೆ.

ಪ್ರಸ್ತುತ ನಾವು ಸಾಕ್ಷಿ ಕಥಾ ಸಂಕಲನವನ್ನು ವಿವರವಾಗಿ ಅಧ್ಯಯನ ಮಾಡುವ ಮೊದಲು ಶ್ರೀಯುತರಿಗೆ ನವ್ಯ ಸಾಹಿತ್ಯಯದ ಪ್ರಭಾವ ಯಾವ ರೀತಿಯ ಪರಿಣಾಮ ಬೀರಿದೆ ಎಂಬುದನ್ನು ಪರಿಶೀಲಿಸಬೇಕಾಗುತ್ತದೆ. ಈ ವಿಷಯದ ಬಗೆಗಿನ ನನ್ನ ವಿಚಾರಗಳನ್ನು ಮೊದಲೇ ಸೂತ್ರದ ರೂಪದಲ್ಲಿ ಮಂಡಿಸಿ, ನಂತರ ಅದನ್ನು ವಿಸ್ತರಿಸುವುದು ಮೇಲು. ನವ ಮೌಖಿಕತೆ ಮತ್ತು ಕಾವ್ಯದ ನಡುವಣ ಸಂಬಂಧ ಮುಖ್ಯವಾಗಿ ಮೂರು ಕ್ಷೇತ್ರಗಳಲ್ಲಿ ಪರಿಣಾಮಕ್ಕೆ ಒಳಪಡುತ್ತವೆ. ಅವುಗಳು ಹೀಗಿವೆ.

ಪದಗಳ ಲಭ್ಯತೆ, ಪ್ರತಿಮಾ ಲಭ್ಯತೆ, ಕುಲದ ಲಭ್ಯತೆ – ಈ ಮೂರು ಪ್ರಾಣದಾಯಕ ಶಕ್ತಿಗಳ ಲಭ್ಯತೆಯ ನವ ಮೌಖಿಕತೆ ಬೆಳೆದಂತೆಲ್ಲಾ ಕವಿಗೆ ಕಡಿಮೆಯಾಗುತ್ತಾ ಹೋಗುತ್ತದೆ

ನ್ನುವುದು ನನ್ನ ವಾದ. ಮೊದಲಿಗೆ ಪದಲಭ್ಯತೆಯನ್ನು ನೋಡುವುದಾದರೆ ನವ ಮೌಖಿಕ ಾಧ್ಯಮದ ಪ್ರಧಾನ ಪರಿಣಾಮ ಏನೆಂದರೆ ಕವಿಗೆ ಲಭ್ಯವಿರುವ ಭಾಷಾ ಸಮೂಹ, ಪದಾರ್ಥ ಮೂಹ ಎನ್ನುವುದು ಕುಗ್ಗುತ್ತಾ ಹೋಗುತ್ತವೆ. ವಿವಿಧ ಮಟ್ಟಗಳಲ್ಲಿ ಕವಿಯ ಜಗತ್ತು ಕುಗ್ಗುತ್ತಾ, ರಗುತ್ತಾ ಹೋಗುವುದೇ ನವ ಮೌಖಿಕತೆಯ ಪ್ರಧಾನ ಸವಾಲು. ಭಾಷೆ ಎಂಬುದು ಉಪ್ಪಿನ ಣ ಹೊಂದಿದ್ದು ಕಾಲ ಕ್ರಮೇಣ ಅದು ಕೆಡುತ್ತಾ ಹೋಗುತ್ತದೆ. ಟಿ.ವಿ ಎಂಬ ಶಕ್ತಿ ಶಾಲಿ ಾಧ್ಯಮ ತನ್ನ ವಿವಿಧ ಕಾರ್ಯಕ್ರಮಗಳಲ್ಲಿ ಒಂದು ನಿರ್ಧಿಷ್ಟ ಭಾಷಾ ಬಳಕೆಯನ್ನು ಆಯ್ಕೆ ಾಡಿ ಅದನ್ನೇ ಹಲವು ರೀತಿಗಳಲ್ಲಿ ಸವಲತ್ತು ನೀಡಿದೆ. ಆಧುನಿಕ ಸಮೂಹ ಮಾಧ್ಯಮಗಳು ಂದು ಬಗೆಯ ಶಕ್ತಿ ಸಂಚಯ. ಈ ಶಕ್ತಿ ಸಂಚಯದ ಭಾಷಾ ಬಳಕೆಗೆ ಅಪಾರ ಆಕರ್ಷಣೆ ುತ್ತು ಅನಿವಾರ್ಯಗಳು ಎದುರಾಗುತ್ತವೆ. ಇದು ಕವಿ ಭಾಷೆಯನ್ನು ಬಳಸುವ ಮೂಲಭೂತ ಮದಲ್ಲೆ ನಿರ್ಧರಿತವಾಗುತ್ತದೆ ಎಂಬ ದುರಂತ, ಸಾಮಾನ್ಯ ಕವಿಗಳಿಗೆ ಅರ್ಥವಾಗುವುದೇ ಕಷ್ಟ. ಲವು ನಿರ್ಧಿಷ್ಟ ಅಂಶಗಳನ್ನು, ವಸ್ತುಗಳನ್ನು ತೆಗೆದುಕೊಂಡು ಸ್ಪಷ್ಟಪಡಿಸಲು ಸಾಧ್ಯವಿದೆ.

ಕವಿಗೆ ಕೆಲವು ಅನುಭವಗಳನ್ನು ಅಥವಾ ಭಾವ ಸಮೂಹಗಳನ್ನು ಹೇಳಬೇಕಾಗಿರುತ್ತದೆ. ದು ಸಮಾಜ, ರಾಜಕೀಯ, ಪ್ರೇಮ, ಧರ್ಮ ಅಥವಾ ಇನ್ನ್ಯಾವುದೊ ನಿರ್ಧಿಷ್ಟ ನುಭವವಾಗಬಹುದು. ನವ ಮೌಖಿಕತೆಯ ಕವಿಯ ವಿಶಿಷ್ಟತೆಯನ್ನು ಾಧಾರಣಿಕರಣಗೊಳಸುವಾಗ ಅದನ್ನು ಅತೀ ಸಾಧಾರಣಗೊಳಸಿ ಜೊಳ್ಳಾಗಿರಿಸುತ್ತದೆ. ನವ ೌಖಿಕತೆಯಲ್ಲಿ ಈ ಪುನರಾವರ್ತನೆ ಎನ್ನುವ ಪಕ್ರಿಯೆ ತನ್ನ ಹಳೆಯ ಸೃಜನಾಶೀಲತೆಯನ್ನು ಳೆದುಕೊಂಡು ಹೊಸ ರೀತಿಯ ಕಾವ್ಯ ನಿರ್ಮಾಣದಲ್ಲಿ ವಾತಾವರಣವನ್ನು ಸೃಷ್ಟಿಸುತ್ತಾ ರುತ್ತದೆ.

ಈ ಮೇಲ್ಕಂಡ ವಿಚಾರವನ್ನು ಅವಲೋಕಿಸುವ ಅಗತ್ಯವಾದರು ಏನೆಂದರೆ, ಶ್ರೀಯುತರ ಥಾ ಸಾಹಿತ್ಯವು ನವ್ಯತೆಯಿಂದ ಕೂಡಿದ್ದು, ಇದನ್ನು ಚರ್ಚಿಸುವ ಅಗತ್ಯ ಇರುವುದರಿಂದ ೀಲಿನ ವಿಚಾರವನ್ನು ಚರ್ಚಿಸುವ ಅನಿವಾರ್ಯತೆ ಆಯಿತು. ಈ ಮೇಲ್ಕಂಡ ಅಭಿಪ್ರಾಯಕ್ಕೆ ಷ್ಟವಾದ ಸಮರ್ಥನೆ ಸಾಕ್ಷಿ ಕಥಾ ಸಂಕಲನದಲ್ಲಿ ಸ್ಪಷ್ಟವಾಗಿ ಗೋಚರಿಸುತ್ತದೆ. ಪ್ರಸ್ತುತ ನಾವು ಾಕ್ಷಿ ಕಥಾ ಸಂಕಲನವನ್ನು ವಿವರವಾಗಿ ಅಧ್ಯಯನ ಮಾಡುವುದಾದರೆ ತಮ್ಮ ಏಳು ಕಥೆಗಳನ್ನು ಾಕ್ಷಿ ಸಂಕಲನದಲ್ಲಿ ಅಳವಡಿಸಿದ್ದಾರೆ. ಅವರ ಕಥೆಗಳು ಬೇರೆ ಬೇರೆ ಕಡೆ ಈವರೆಗೆ ಕಟವಾಗಿದ್ದರು ಸಂಕಲನದ ರೂಪದಲ್ಲಿ ಒಂದೆಡೆ ಅಳವಡಿಸಿರುವುದು ಇದೇ ಮೊದಲು.

ಪ್ರಯೋಗಶೀಲ ಲೇಖಕರಾದ ಇವರು ಕಥೆಯಿಂದ ಕಥೆಗೆ ತಿರುವುಗಳನ್ನು ನೀಡುತ್ತ, ಮೇಣ ತನ್ನ ಪರಿಸರದಲ್ಲಿ ತನ್ನನ್ನು ಗುರುತಿಸಿಕೊಂಡಿರುವುದು ಆಶಾದಾಯಕ ೂಚನೆಯಾಗಿದೆ.

**"ಸಾಕ್ಷಿ"** ಕಥಾ ಸಂಕಲನದಲ್ಲಿ ಭಾಷೆ ಹಾಗೂ ದೃಷ್ಟಿಕೋನದ ಬಗ್ಗೆ ವಿಶೇಷವಾಗಿ ಮಾತನಾಡಲೇಬೇಕು. ಮಂಡ್ಯದ ಹಾಸು-ಪಾಸಿನ ಜೀವಂತ ಭಾಷೆಗೆ ಸಂಕೇತ ಹಾಗೂ ಪ್ರತಿಮೆಗಳನ್ನು ವ್ಯವಸ್ಥಿತವಾಗಿ ಸೇರಿಸುವುದರ ಮೂಲಕ ಭಾಷೆಯಲ್ಲಿ ಕಲಾತ್ಮಕತೆಯನ್ನು ಸಾಧಿಸಿದ್ದಾರೆ. ಆದ್ದರಿಂದ ಭಾಷೆಗೆ ಧ್ವನಿಶಕ್ತಿ ಪ್ರಾಪ್ತವಾಗಿದೆ. ಈ ಮೇಲ್ಕಂಡ ಅಭಿಪ್ರಾಯಕ್ಕೆ ಸ್ಪಷ್ಟವಾದ ಸಮರ್ಥನೆ ಸಾಕ್ಷಿ ಕಥಾ ಸಂಕಲನದಲ್ಲಿ ಚಾಚು ತಪ್ಪದೆ ಗೋಚರವಾಗುತ್ತದೆ. ಇಲ್ಲಿನ ವಸ್ತು ಹಾಗೂ ಭಾಷೆಯ ನಿರ್ವಹಣೆಯನ್ನು ಗಮನಿಸಿದರೆ ನವ್ಯ ಸಾಹಿತ್ಯದ ಚಳುವಳಿಯ ಪ್ರಭಾವ ಕಥಾ ಸಂಕಲನದ ಮೇಲೆ ಆಗಿದೆ ಎನಿಸುತ್ತದೆ. ಈ ಪ್ರಮಾಣದಲ್ಲಿ ವಸ್ತುವಿನ ಆಯ್ಕೆ ಹಾಗೂ ಭಾಷೆಯಲ್ಲಿ ಮೇಲಿಂದ ಮೇಲೆ ಸಂಕೇತ ಹಾಗೂ ಪ್ರತಿಮೆಗಳನ್ನು ಬಳಸಿ ಭಾಷೆಯನ್ನು ಅನುಕೂಲಕರವಾಗಿ ಬಳಸಿಕೊಂಡಿರುವುದು ಕಂಡುಬರುತ್ತದೆ. ಇಂದು ನವ್ಯ ಮಾರ್ಗದಿಂದ ಎರಡು-ಮೂರು ದಶಕಗಳಿಂದ ದೂರದಲ್ಲಿ ನಿಂತು ನವ್ಯ ಕಾವ್ಯವನ್ನು ವ್ಯಾಖ್ಯಾನಿಸಲು ಪ್ರಯತ್ನಿಸಿದಾಗ ಬಗೆ ಬಗೆಯ ವಿರೋಧ ಭಾಷೆಗಳು ಹಾಗೂ ಸಂಧಿಗ್ದಗಳು ಎದುರಾಗುತ್ತವೆ. ಐವತ್ತರ ದಶಕದಲ್ಲಿ ನವ್ಯತೆಯ ಬಗ್ಗೆ ಕಂಡುಬಂದ ಅತ್ಯುತ್ಸಾಹ ಮತ್ತು ಎಪ್ಪತ್ತರ ದಶಕದಲ್ಲಿ ಕಂಡು ಬಂದ ತೀವ್ರ ಟೀಕೆ, ತಿರಸ್ಕಾರ ಇವೆರಡು ಪ್ರತಿಕ್ರಿಯೆಗಳು ಇಂದು ನಮಗೆ ಆಶ್ಚರ್ಯವನ್ನು ಉಂಟು ಮಾಡುತ್ತವೆ.

ಹಾಗೆಯೆ 'ಯುಗ ಧರ್ಮವು ಬದಲಾದಂತೆ ಸಾಹಿತ್ಯದ ಸ್ವರೂಪವು ಬದಲಾಗುತ್ತದೆ. ಬದಲಾದ ಯುಗಧರ್ಮವನ್ನು ಸೂಕ್ಷ್ಮ ಸಂವೇದನೆಯ ಸಾಹಿತಿ ಎಲ್ಲರಿಗಿಂತಲು ಮೊದಲು ಗ್ರಹಿಸಿ ಅದನ್ನು ದಾಖಲಿಸುತ್ತಾನೆ' ಎಂಬ ನಿಲುವು ಪ್ರಶ್ನೆಯಾಗಿಯೆ ಉಳಿಯುತ್ತದೆ. 'ಯುಗಧರ್ಮ' ಎಂಬ ಒಂದು ಪರಿಕಲ್ಪನೆಯನ್ನೆ ಇಂದು ಒಪ್ಪಲು ಕಷ್ಟವಾಗುತ್ತದೆ. ಅದೇನು ಒಂದು ದತ್ತ ಹಾಗೂ ಮೂರ್ತ ಸಂಗತಿಯಲ್ಲ. ಸಾಧಾರಣವಾಗಿ ವಿಮರ್ಶಕರು ನವ್ಯ ಕಾವ್ಯವನ್ನು ಬದಲಾದ ಯುಗ ಸಂವೇದನೆ ಎಂಬ ವ್ಯಾಖ್ಯಾನದಲ್ಲಿ ವ್ಯಾಖ್ಯಾನಿಸುತ್ತಾರೆ. ಈ ದೃಷ್ಟಿಯಿಂದ ಯುಗ ಧರ್ಮ, ಚಾರಿತ್ರಿಕ ಅನಿವಾರ್ಯತೆ ಮುಂತಾದ ಮಹಾಕಥನಗಳನ್ನು ಮರೆತು ನವ್ಯ ಕಾವ್ಯದ ಉಗಮದ ಬಗ್ಗೆ ಚಿಂತಿಸಿದರೆ ಸರಳೀಕೃತವೆಂದು ತೋರಬಹುದು.

ಯಾವ ಒಂದು ಸಾಹಿತ್ಯಿಕ ತಿರುವಿನಲ್ಲಿಯು ವೈಯಕ್ತಿಕ ಒತ್ತಡದ ತಿರುವುಗಳು ಗಣನೀಯ ಪ್ರಮಾಣದಲ್ಲಿ ಇರುತ್ತವೆ. ಪ್ರತಿಭಾಶಾಲಿಯಾದ ಕವಿ/ಲೇಖಕ ತನ್ನ ಅನನ್ಯತೆಯನ್ನು ಆತೀಯತೆಯನ್ನು ಕಂಡುಕೊಳ್ಳಲು ಸಮಕಾಲೀನ ಹಿರಿಯ ಕವಿ ಹಾಗೂ ಲೇಖಕರಿಗಿಂಗ ಭಿನ್ನವಾದ ಮಾರ್ಗವನ್ನು ಶೋಧಿಸುತ್ತಾನೆ. ಈ ಮಾತು ಅಡಿಗರಿಗು, ಗೋಕಾಕರಿಗು ಅನ್ವಯಿಸುತ್ತದೆ. ಅಡಿಗರೆ ಒಂದು ಸಂಧರ್ಶನದಲ್ಲಿ ಹೇಳಿರುವಂತೆ ಬೇಂದ್ರೆಯವರ ಪ್ರಭಾವದಿಂದ ತಪ್ಪಿಸಿಕೊಳ್ಳಲು ಅವರು ಒಂದೆರಡು ವರ್ಷಗಳ ಕಾಲ ಕಾವ್ಯ ರಚನೆಯನ್ನೇ ಕೈಬಿಟ್ಟಿದ್ದರು. ಅಂದು ಎತ್ತರಕ್ಕೆ ಬೆಳೆದಿದ್ದ ಕುವೆಂಪುರವರು ಬೇಂದ್ರೆಯವರುಗಳಿಂದ ಭಿನ್ನವಾಗಿ ಚಿಂತಿಸಲು ಬರೆಯಲು

ಡಿಗರು ಸದಾ ಶೋಧಿಸುತ್ತಿದ್ದರು ಮತ್ತು ಅಂತಹ ಒಂದು ಸಾಧ್ಯತೆ ರಮೇಶ ಹುಲ್ಲುಕೆರೆಯವರಲ್ಲಿ ಕಂಡಿತು.

ರಮೇಶ ಹುಲ್ಲುಕೆರೆಯವರು ತಮ್ಮ ಸಾಕ್ಷಿ ಕಥಾಸಂಕಲನದಲ್ಲಿ ಭಾಷೆ ಹಾಗೂ ದೃಷ್ಟಿಕೋನದ ಬಗ್ಗೆ ವಿಶೇಷವಾಗಿ ಮಾತನಾಡಲೇ ಬೇಕು. ಮಂಡ್ಯದ ಹಾಸುಪಾಸಿನ ಜೀವಂತ ಭಾಷೆಗೆ ಸಂಕೇತ ಹಾಗೂ ಪ್ರತಿಮೆಗಳನ್ನು ವ್ಯವಸ್ಥಿತವಾಗಿ ಸೇರಿಸುವುದರ ಮೂಲಕ ಭಾಷೆಯಲ್ಲಿ ಕಲಾತ್ಮಕತೆಯನ್ನು ಸಾಧಿಸಿದ್ದಾರೆ. ಆದ್ದರಿಂದ ಭಾಷೆಗೆ ಧ್ವನಿಶಕ್ತಿ ಪ್ರಾಪ್ತವಾಗಿದೆ.

ಪ್ರಕೃತ ಸಾಕ್ಷಿ ಸಂಕಲನದಲ್ಲಿ 'ಗೆದ್ದಲು, ಸೋಲು, ಅಸಂಗತ' ಈ ಮೂರು ಒಂದು ವರ್ಗದ ಕಥೆಗಳಾದರೆ ಉಳಿದ 'ಸಿದ್ಧತೆ, ಸಾಕ್ಷಿ, ಸ್ಥಿತಿ ಮತ್ತು ಆಕ್ರಮಣ' ಮತ್ತೊಂದು ವರ್ಗದ ಕಥೆಗಳು. ಕೊನೆಯ ನಾಲ್ಕು ಕಥೆಗಳು ವಿಶಿಷ್ಟ ಗ್ರಾಮೀಣ ಆವರಣದಲ್ಲಿ ಮೂಡಿ ಬಂದಿವೆ. ಮೊದಲ ಮೂರು ಕಥೆಗಳು ನಾಗರೀಕ ಆವರಣದಲ್ಲಿ ಅರಳಿ ಪ್ರತ್ಯೇಕವಾಗಿ ಉಳಿಯುತ್ತವೆ.

ರಮೇಶ ಹುಲ್ಲುಕೆರೆಯವರ ಕಥನಾಕಲೆ ಮೂರು ಕಥೆಗಳಲ್ಲಿ ಒಂದು ನೆಲೆ ಗುರುತಿಸಿಕೊಳ್ಳುವ ಪ್ರಯತ್ನದಲ್ಲಿ ತೊಡಗುವಂತೆ ಕಂಡುಬಂದು ಕೊನೆಯ ನಾಲ್ಕು ಕಥೆಗಳಲ್ಲಿ ಒಂದಕ್ಕೊಂದು ಸ್ಪಷ್ಟವಾದ, ಸಹಜವಾದ, ದಷ್ಟವಾದ ಪಾತ್ರಗಳು ಲಭ್ಯವಾಗಿವೆ. ಅದರ ನಡುವೆ ಲೇಖಕನ ಅನುಭವ ಪ್ರತಿಭೆಗಳು ಸಮರಸಗೊಂಡು ಉತ್ತಮ ಕೃತಿಗಳ ಸೃಷ್ಟಿಗೆ ಕಾರಣವಾಗುತ್ತವೆ.

ಪ್ರಸ್ತುತ ಸಂದರ್ಭದಲ್ಲಿ ಗೆದ್ದಲು, ಸೋಲು, ಅಸಂಗತ ಈ ಮೂರು ಕಥೆಗಳ ಭೂಮಿಕೆಯು ಒಂದೇ ಆಗಿರುವುದನ್ನು ನಾವು ನೋಡಬಹುದು. 'ಗೆದ್ದಲು ಕಥೆಯಲ್ಲಿ ಶೇಖರನ ಪಾತ್ರ', 'ಸೋಲು ಕಥೆಯಲ್ಲಿ ವಿನಯನ ಪಾತ್ರ', 'ಅಸಂಗತ ಕಥೆಗಳಲ್ಲಿ ಅನಂತನ ಪಾತ್ರ' ಈ ಮೂವರು ಒಂದೇ ಬಗೆಯ ಅಂತರ್ ಮುಖಗಳು. ತಮ್ಮ ನಿತ್ಯ ಸಮಾಜದಲ್ಲಿ ಎದುರಾಗುವ ಕೇವಲ ಸಾಮಾನ್ಯ ಸಮಸ್ಯೆಗಳನ್ನು ಎದುರಿಸಲುಸಾಧ್ಯವಾಗದೆ ಧೈರ್ಯ ಸಾಲದೆ ಮಾನಸಿಕ ತೊಳಲಾಟಕ್ಕೆ ಒಳಗಾಗಿ ಆಧುನಿಕ ವಿದ್ಯಾವಂತ ಯುವ ಪೀಳಿಗೆಯಲ್ಲಿ ಉತ್ತಮ ಸಂಸ್ಕಾರವುಳ್ಳ ಯುವಕರೆ ಆದರು ಧೈರ್ಯ, ಎದೆಗಾರಿಕೆ, ಆಸ್ಥೆಯಲ್ಲಿ ತುಸು ಹಿಂದೆ ಬಿದ್ದವರು.

ಇಲ್ಲಿ ಬರುವ ಸ್ತ್ರೀ ಪಾತ್ರಗಳು ಎಲ್ಲೊ ಕನಸಿನಲ್ಲಿ ಹಾದು ಹೋಗುವಂತೆ ಕಂಡುಬಂದರು ಹೆಚ್ಚು ಪರಿಣಾಮಕಾರಿಯಾಗಿ ಮೂಡಿಬರುತ್ತದೆ. ಮೂರು ಕಥೆಗಳನ್ನು ಪ್ರಣಯ ಕಥೆಗಳು ಸುಕುಮಾರತೆಯಂತೆ ಕಂಡುಬಂದರು ಹುಲ್ಲುಕೆರೆಯವರ ಶೈಲಿಯ ಹೊಸತನದಿಂದ ಆ ಕಥೆಗಳಿಗೆ ವಿಶೇಷ ಮೆರಗು ಬಂದಿದೆ.

ನಾಯಕನ ಮನಸ್ಸಿನ ತೊಳಲಾಟವನ್ನು ಮಾರ್ಮಿಕವಾಗಿ ಬಿಡಿಸುತ್ತ ಸಾಗುವಲ್ಲಿ ಉತ್ತಮ ಕಲೆಗಾರಿಕೆ ಕಂಡುಬರುತ್ತದೆ. ಹುಲ್ಲುಕೆರೆಯವರ ಆರಂಭದ ಕಥೆಗಳಾದರು ಒಳ್ಳೆಯ

ಬರವಣಿಗೆಯ ಶಕ್ತಿಯನ್ನು ತುಂಬಿಕೊಂಡು ತಮ್ಮ ಕಥೆಗಳಲ್ಲಿ ಕಲೆಗಾರಿಯನ್ನು ಸ್ಥಾಪಿಸಿಕೊಳ್ಳಲು ನಡೆಸಿದ ಒಳ್ಳೆಯ ಪ್ರಯತ್ನಗಳಾಗಿವೆ.

ಕ್ರಮವಾಗಿ ಮೊದಲ ಮೂರು ಕಥೆಗಳಲ್ಲಿ ಗೆದ್ದಲು ಕಥೆಯ ಸಾರವನ್ನು ಗಮನಿಸಿದಾಗ ಪ್ರಸಕ್ತ ಕಥೆಯಲ್ಲಿ ಶೇಖರನ ಮನಸ್ಸಿನ ಪದರಗಳನ್ನು ಲೇಖಕರು ಬಿಡಿಸುತ್ತ ಹೋಗುವ ರೀತಿಯೆ ವಿನೂತನವಾಗಿದೆ.

ಇಪ್ಪತ್ತು ದಾಟಿದ ವಯಸ್ಸು, ಮನಸ್ಸು ಬಣ್ಣ ಬಣ್ಣದ ಕನಸು ಕಾಣುತ್ತಾ ಹಸಿರು ಬಯಲಿನ ಮೇಲೆ ಓಡಾಡುವಾಗ ಬೆಳಗಾಗಿ ಹೆಚ್ಚರವಾಗುತ್ತದೆ. ಅಮ್ಮ ಎದ್ದಿದ್ದೆ ಏನೊ ಅನ್ನುತ್ತಾಳೆ. ಅಡುಗೆಯ ಮನೆಯಲ್ಲಿ ಅಮ್ಮ ಸೋತು ಸುಣ್ಣವಾಗಿದ್ದಾಳೆ ಅನಿಸುತ್ತದೆ. ತಿಂಡಿ ತಿನ್ನುವವರೆಗು ಅವಳಗಾಗಿ ಮರುಗುತ್ತಾನೆ. ಆಮೇಲೆ ಅಮ್ಮ ಪಾತ್ರೆಗಳ ಮುಂದೆ ಕುಳತು ಮಸಿ ಉಜ್ಜಲು ಶುರು ಮಾಡುತ್ತಾಳೆ. ಕೈಯಲ್ಲಿ ಕಟ್ಟಿದ ಗಡಿಯಾರ ಕಾಲೇಜನ್ನು ನೆನಪಿಗೆ ತರುತ್ತದೆ. ಕಾಲೇಜಿಗೆ ಹೊರಟಿರುವ ಹುಡುಗರ ಗುಂಪು ಕಿಲ ಕಿಲನೆ ನಗುವ ಹುಡುಗಿಯರ ಬೆಳ್ಳನೆಯ ಹಲ್ಲುಗಳು ಅಣಕಿಸಿದಂತಾಗುತ್ತದೆ. ಕುಡಿದ ಕಾಫಿ ಹೊಟ್ಟೆಯೊಳಗೆ ಕಲಸಿದಂತಾಗುತ್ತದೆ. ತನ್ನನ್ನೆ ನೋಡುತ್ತಿರುವ ಮ್ಯಾನೆಜರಿಗೆ ಗುಟ್ಟು ಬಯಲಾಗದಂತೆ ನಟಿಸುವಾಗ ಹತ್ತಿರ ಬರುತ್ತಾನೆ. "ಎಲ್ಲಿ ಸಾರ್ ನಿಮ್ಮವರು" ಅಂತ ಮೀಸೆಯ ಕೆಳಗೆ ನಗುತ್ತ ಹಲ್ಲು ಕಿರಿಯುತ್ತಾನೆ. ಪ್ರಾಟಿಕಲ್ ಹಲ್ಲಿನಲ್ಲಿ ನಡೆಯುವಾಗ ಗಾಜಿನ ಪೆಟ್ಟಿಗೆಯಲ್ಲಿ ಕೂಡಿಟ್ಟ ಚೇಳುಗಳು ಮೆದುಳನ್ನು ಕೆರೆದಂತಾಗುತ್ತದೆ. ಮನಸ್ಸು ಜಿರಲೆಯಾಗುತ್ತದೆ. ಚಿತ್ರ ಬರೆಯಬೇಕೆಂದುಕೊಂಡಾಗ ಪ್ಯಾಂಟಿನ ಜೇಬಿನಲ್ಲಿರುವ ರಬ್ಬರ್ ಪನ್ಸಿಲನ್ನು ಮುಟ್ಟಿನೋಡಿ ಚೋಪಾಗಿದೆ ಎಂದುಕೊಂಡು ಹೊರಗೆ ಬಂದು ನಿಂತುಕೊಳ್ಳುತ್ತಾನೆ. ಇವನಿಗೆ ಕ್ಲಾಸ್ ಬಿಟ್ಟು ಎಷ್ಟು ಹೊತ್ತಿಗೆ ಹೊರಗೆ ಬರುತ್ತೇನೊ ಎಂದು ಮನಸ್ಸಿನಲ್ಲಿ ಅಂದುಕೊಳ್ಳುತ್ತಿದ್ದಂತೆ ಬೆಲ್ಲು ಹೊಡೆಯುತ್ತದೆ. ಉಪನ್ಯಾಸಕರ ಕಣ್ಣು ತಪ್ಪಿಸಿ ಹೊರಗೆ ಬಂದು ತಂಗಾಳಯಲ್ಲಿ ನಿಟ್ಟುಸುರು ಬಿಟ್ಟ.

ಶೈಲ ಎನ್ನುವ ಪಾತ್ರವು ಶೇಖರನ ಪಾತ್ರಕ್ಕೆ ಮೆರಗುಂಟು ಮಾಡುತ್ತದೆ. ರಾತ್ರಿ ಮಲಗಿ ಏಳುವ ಸಮಯದಲ್ಲಿ ಸೂರ್ಯನ ಕಿರಣಗಳು ತುಂಬಿ ಹೋಗಿರುತ್ತವೆ. ತೆಂಗಿನ ಗರಿಯಿಂದ ನೀರು ಸೋರುತ್ತಿರುತ್ತದೆ. ರಾತ್ರಿಯೆಲ್ಲ ಮಳೆ ಬಿದ್ದಿರಬೇಕು. ಭಾರವಾದ ದೇಹವನ್ನು ಗಾಳಯಲ್ಲಿ ಜಾಡಿಸಿ ಮೈಕೊಡವಿಕೊಂಡು ಶೇಖರನು ನೀರು ಮನೆ ಹೊಕ್ಕ. ಶೈಲ ಸೋಪು, ಟವಲು, ಪೇಸ್ಟ್, ಬ್ರಷ್ ತಂದುಕೊಡುತ್ತಾಳೆ. ಹಲ್ಲು ಉಜ್ಜುತ್ತ ಕಾಂಪೌಂಡಿನಲ್ಲಿ ಸುತ್ತುವಾಗ ಬಿರುಗಾಳಗೆ ಸಿಕ್ಕಿ ಕಾಗೆಯ ಗೂಡು ಮಣ್ಣು ಪಾಲಾಗುತ್ತದೆ. ಮನೆಯ ಮೇಲೆ ಕುಳತು ಅರಚುತ್ತಿರುವ ಕಾಗೆಯನ್ನು ಅಮ್ಮ ಓಡಿಸು ಎನ್ನುತ್ತಾಳೆ. ಶೈಲ ಏನ್ನನ್ನೊ ಹೇಳುತ್ತಿದ್ದಾಳೆ. ನೀರು ಮನೆ ಹೊಕ್ಕ ಶೇಖರ ಅಪ್ಪ ಹೋಗಿದ್ದು ಕೇಳಸಿಕೊಂಡು ಹೊರಗೆ ಬಂದ. ಗೇಟಿನ ಬಳ ನಿಂತ. ಅಪ್ಪ "ಶೇಖರ ಗೆದ್ದಲ ಹುಳು ಹರಿದಾಡುತ್ತಿವೆ. ಮನೆಯೊಳಗೆ ಗೂಡು ಕಟ್ಟಲು ಬಿಡಬೇಡ. ತೆಗೆದು ಹಾಕು" ಅಂತ ಹೇಳ

ಹೋದರು. ಮಣ್ಣಿನ ಸಣ್ಣ ಹೆಂಟೆಯನ್ನು ಹೊರಗೆ ಬಿಡುತ್ತಿದ್ದುದ್ದನ್ನು ನೋಡಿ ಶೈಲ ಅಸಹ್ಯಪಟ್ಟುಕೊಂಡಳು.

ಶೈಲ ಮೊನ್ನೆ ಮೊನ್ನೆ ಊರಿಗೆ ಹೋದಂತಿದೆ. ಅವಳು ಹೋದ ಮೇಲೆ ಮಳೆ ಬಿದ್ದು ಗೆದ್ದಲ ಗೂಡು ದಿನೇ ದಿನೇ ಬೆಳೆಯುತ್ತಿರುವುದನ್ನು ಕಂಡಾಗ ಪುಷ್ಪಳ ನೆನಪು ಬರುತ್ತದೆ. ಅವಳ ಮುಖ ಕಾಲೇಜಿನಲ್ಲಿ ಮರೆಯಾದ ದಿನದಿಂದ ದೇಹದ ಯಾವುದೊ ಭಾಗ ಕಳಚಿಕೊಂಡು ಕಿರಿ ಕರಿ ಶಬ್ಧ ಮಾಡುತ್ತದೆ. ಪುಷ್ಪಳೊಡನೆ ರಸ್ತೆಯಲ್ಲಿ ನಡೆದಂತೆ ಅರಿವಾಗುವುದಿಲ್ಲ. ಮಾತಿನಲ್ಲಿ ಮೋಡಿ ಇದೆ. ಒಂದೇ ಸಮನೆ ಜೇನಿನ ಹೊಳೆಯಲ್ಲಿ ತೇಲಿಸುತ್ತಾಳೆ. ಅವಳೊಡನೆ ಮಾತಾಡುವುದಕ್ಕಿಂತ ಹೆಚ್ಚಾಗಿ ಕೇಳುವುದೇ ಇಲ್ಲ. ಅವಳು ನನ್ನ ಜೊತೆ ಫ್ರೀಯಾಗಿ ನಡೆದುಕೊಳ್ಳುತ್ತಾಳೆ. ಅನಿಸಿದೆಲ್ಲವನ್ನು ಆಡುತ್ತಾಳೆ. ಅವಳಿಗೆ ಬೆಟ್ಟ ಹತ್ತು ಆಸೆ ಇದೆ ಎಂದು ಶೇಖರ ಸ್ಕೂಟರಿನಲ್ಲಿ ಕುಳಿತುಕೊ ಅಂದ. ಬೇಡ ನಡೆದುಕೊಂಡೆ ಹೋಗೋಣ ಅಂದಾಗ ಒಪ್ಪಿಗೆ ಸೂಚಿಸಿದ. ಅರ್ಧ ಬೆಟ್ಟ ಹತ್ತಿದ ಮೇಲೆ ಮೆಟ್ಟಿಲು ಹತ್ತಿದರೆ ಎಷ್ಟು ಚೆಂದ. ಹೀಗೆ ಹೋಗೋಣ ಎಂದು ಕೈ ಮೇಲೆ ಮಾಡಿ ತೋರಿಸಿದಳು. ಮುಳ್ಳು ತುಂಬಿರುವ ಹಾದಿ ಇದು. ಬಂಡೆ ಹತ್ತಲು ಸಾಧ್ಯವಾಗುವುದೆ ಎಂದು ಯೋಚಿಸಿದ. ಮುಳ್ಳಿನ ಪೊದೆಯಲ್ಲಿ ಮರೆಯಾದ ಪುಷ್ಪಳನ್ನು ಅನುಸರಿಸಿ ಬಂಡೆಯ ಮೇಲೆ ನಿಂತು 'ಪುಷ್ಪ' ಅಂದ. ಬೇಗ ಬನ್ನಿ ಅಂದಳು. ಗಾಳಿಗೆ ಹಾರುತ್ತಿದ್ದ ಸೆರಗಿನ ಮೇಲೆ ಪ್ರಜ್ಞೆ ಇಲ್ಲದೆ ಬಂಡೆಯ ಮೇಲೆ ವಿಶ್ರಾಂತಿ ತೆಗೆದುಕೊಳ್ಳುವಂತೆ ಮಲಗಿದ ಅವಳನ್ನು ಕಂಡು ಹಿಂದಿನಿಂದ ಬೆಕ್ಕಿನಂತೆ ಹಾರಿದ. "ನೀವಾ? ತುಂಬ ಹೆದರಿಸಿಬಿಟ್ಟಿರಿ" ಅಂತಾ ಬೆನ್ನಿನ ಗಾಯಗಳನ್ನು ತೋರಿಸಿದಳು. ಬಂಡೆ ಹತ್ತಿ ಸುಸ್ತಾಗಿದ್ದಾಳೆ ಅಂದುಕೊಂಡ. ಇತ್ತೀಚೆಗೆ ಪುಷ್ಪ ತನ್ನಿಂದ ದೂರವಾಗುತ್ತಿದ್ದಾಳೆ. ಅವಳಿಗೆ ಸ್ಕೂಟರಿನ ಹಿಂದೆ ಕೂರಲು ಹೆದರಿಕೆಯೆ? ಎಲ್ಲಾದರು ಕೆಡವಿ ಬಿಡುವೆನೆನ್ನುವ ಭಯವೇ? ಈ ವಿಷಯದಲ್ಲಿ ಶೈಲ ಒಂದು ಹೆಜ್ಜೆ ಮುಂದು. ಅವಳ ಹೊಳಪಿನ ಕಣ್ಣುಗಳಲ್ಲಿ ತನ್ನನ್ನು ಚೆನ್ನಾಗಿ ಗುರುತಿಸಿಕೊಂಡಿದ್ದಾಳೆ ಅನಿಸುತ್ತದೆ. ಅವಳಿಂದ ಪತ್ರ ಬಂದು ಬಹಳ ದಿನಗಳಾಯಿತು. ಈಗ ಪತ್ರ ಬರೆದರೆ ಅವಳು ಹಿಂದಿನ ಬಾಗದಕ್ಕೆ ಉತ್ತರಿಸಬೇಕು. ಶೇಖರ ರೂಮಿನಲ್ಲಿ ಗರಗರನೆ ಸುತ್ತುತ್ತಿದ್ದ. ಕಿಟಕಿಯಲ್ಲಿ ಕಣ್ಣು ತೂರಿ ಬೆಪ್ಪು ಹಿಡಿದವನಂತಾದ.

ಕಾಂಪೌಂಡಿನೊಳಗೆ ಬೆಳೆದ ಗೆದ್ದಲ ಗೂಡು ಯಾರಿಗು ಹಿಡಿಸುತ್ತಿಲ್ಲ. ಹೊರಗಿನಿಂದ ಬಂದವರು ತೀರ ಅಪರಿಚಿತರು. ಅಷ್ಟೇನು ಆತ್ಮೀಯರಲ್ಲದವರು, ಅರಿಶಿನ, ಕುಂಕುಮ ಬಳಿದು, ಹೂ ಮುಡಿಸಿ, ಪೂಜೆ ಮಾಡುತ್ತಿದ್ದುದ್ದನ್ನು ನೋಡಿದಾಗ ತೀರ ಹುಚ್ಚನಂತಾದ. ಈ ವಿಚಾರವನ್ನು ನೋಡಿದ ಶೇಖರನು ನೆಟ್ಟಗೆ ಗೆದ್ದಲಗೂಡಿನತ್ತ ಹೊರಟ. ಅಗೆಯಬೇಕು, ಬೇರು ಸಹಿತ ಕಿತ್ತಂತೆ ಗೂಡನ್ನು ಅಗೆದು ಹಾಕಬೇಕು. ಹಾವನ್ನು ಚಚ್ಚಿ ಗುರುತು ಸಿಗದಂತೆ ಮಾಡಬೇಕು ಎಂದು ಬಂದವನು ಗಕ್ಕನೆ ನಿಂತು ನೋಡುತ್ತಿದ್ದಂತೆ ಅಮ್ಮ ಅಡ್ಡವಾದಳು. "ಹುತ್ತ ಅಗೆದರೆ ಪಾಪ

ರುತ್ತದೆ" ಅಂದಳು. ನೋಡುತ್ತ ನಿಂತಿದ್ದ ಹುಡುಗರು ಶೇಖರನ ಅವಸ್ಥೆಯನ್ನು ಕಂಡು ಸಕಿಸನೆ ನಕ್ಕರು. ಶೇಖರ ಕೈಯಲ್ಲಿದ್ದ ಗುದ್ದಲಿ ಬಿಸಾಡಿ ಹುರಿ ಬಿಸಿಲಿನಲ್ಲಿ ಕಣ್ಮರೆಯಾದ. ಈ ಮೇಲಿನ ವಿಚಾರವಾಗಿ ಚರ್ಚಿಸಿ ನೋಡಿದಾಗ "ಗಾಜಿನ ಪೆಟ್ಟಿಗೆಯಲ್ಲಿ ಕೂಡಿಟ್ಟ ಚೇಳುಗಳು ಮಿದುಳನ್ನು ಕೆರೆದಂತಾಗುತ್ತದೆ ಎಂಬ ಮಾತಿ ಮೂಲಕ ನಾಯಕನ ಅಂತರಂಗಕ್ಕೆ ಕನ್ನಡಿ ಹಿಡಿಯುವ ವೈಖರಿ ಅಪೂರ್ವವಾಗಿ ಚೇಳಿನ ಪ್ರತಿಮೆ, ಇಲ್ಲಿ ತುಂಬಾ ಪರಿಣಾಮಕಾರಿಯಾಗಿ ಕೆಲಸ ಮಾಡುತ್ತದೆ.

ತನ್ನ ಕಾಲೇಜಿನ ಸಹಪಾಠಿ ಪುಷ್ಪಳು ಒಂದು ಕಡೆ ಶೇಖನ ಮನಸ್ಸನ್ನು ಸಂಪೂರ್ಣವಾಗಿ ಗೆದ್ದುಕೊಂಡಿದ್ದಾಳೆ. ಇನ್ನೊಂದು ಕಡೆ ಮುಗ್ಧ ಹುಡುಗಿ ಶೈಲ ತನ್ನ ಬಂಧುವೇ ಆಗಿದ್ದ ಶೇಖರನೊಡನೆ ಸಲಿಗೆಯಿಂದ ವರ್ತಿಸುತ್ತಿದ್ದಾಳೆ. ಶೇಖರನಿಗೆ ಜಿರಲೆಯು ನೀರಿನಲ್ಲಿ ಅಲೆದಾಡುವ ಸಂದರ್ಭವು ಗಿರಗಿರನೆ ಸುತ್ತುವಾಗ ಓಡಬೇಕು ಎನಿಸುತ್ತಿದೆ. (ಪ್ರಾಕ್ಟಿಕಲ್ ಹಾಲ್‌ನಲ್ಲಿ) ಸಾಧ್ಯವಾಗದೆ ಮುಖದ ಮೇಲೆ ಬೆವರ ಹನಿಗಳನ್ನು ಒರೆಸುವಾಗ ನೀರು ಬದಲಾಯಿಸಲೆ ಅಂತ ಹತ್ತಿರ ಬಂದು ಅಟೆಂಡರ್ ಪ್ರತಿ ನಿಮಿಷವು ತನ್ನ ಅಸಹಾಯಕತೆಯನ್ನು ಅಳೆಯುತ್ತಿದ್ದಾನೆ ಎನಿಸಿ ಆದಷ್ಟು ಇವನ ವಿಷದ ಕೊಂಡಿಯಿಂದ ದೂರವಿರಬೇಕು ಅಂದುಕೊಂಡು ತಾನೇ ಪ್ರಶ್ನಿಸಿಕೊಂಡು ಮನಸ್ಸು ನಿನೇಷ್ಟು "ಪುಕ್ಕಲ" ಎಂದು ಹೀಯಾಳಿಸಿದಂತಾಗಿ ಬೆಲ್ಲು ಹೊಡೆಯುವುದೇ ತಡ ಲೆಕ್ಚರರ್ ಕಣ್ಣು ತಪ್ಪಿಸಿ ಹೊರಗೆ ಬಂದು ನಿಟ್ಟುಸಿರು ಬಿಡುತ್ತಾನೆ. ಈ ಸಂದರ್ಭವು ಮಾನಸಿಕ ತೊಳಲಾಟವನ್ನು ಕುರಿತು ಮತ್ತು ಶೇಖರನು ಕೇವಲ ಒಬ್ಬ ಅಟೆಂಡರ್‌ನನ್ನು ಎದುರಿಸಲು ಸಾಧ್ಯವಾಗದೆ ಅವನ ಅಸಹಾಯಕತೆಯನ್ನು ಬಹಳ ನಿರಾಸೆಯಿಂದಲೆ ಲೇಖಕರು ಬೇಸರ ವ್ಯಕ್ತಪಡಿಸಿದ್ದಾರೆ.

ಪುಷ್ಪಳನ್ನು ಇತ್ತ ಬಿಡಲಾಗದ ಶೈಲಜಳನ್ನು ಕಳೆದುಕೊಳ್ಳಲಾಗದ ನಾಯಕ ತತ್ತರಿಸಿ ಹೋಗುತ್ತಾನೆ. ಪುಷ್ಪಳ ನೆನಪು ಪ್ರಭಲವಾದ ಗೆದ್ದಲಗೂಡಾಗಿ ಬೆಳೆಯುತ್ತದೆ. ಆದರೆ ಪುಷ್ಪಳನ್ನು ಗೆಲ್ಲುವಲ್ಲಿ ಶೇಖರನ ಗೆಳೆಯ ರವಿ ಜಯಶೀಲನಾಗುತ್ತಾನೆ, ಶೇಖರ ಸೋಲುತ್ತಾನೆ.

ತನ್ನ ಅಂತರಂಗದಲ್ಲಿ ಬೆಳೆದ ನೆನಪಿನ ಹುತ್ತವನ್ನು ಕಿತ್ತೆಸೆಯುವ ಮುನ್ನ ಪ್ರತಿಬಿಂಬಿಸುವಂತೆ ಹುತ್ತ ಮತ್ತು ಹಾವಿನ ಸಂಕೇತವನ್ನು ತುಂಬಾ ಅರ್ಥಪೂರ್ಣವಾಗಿ ಹೊನೆಯಲ್ಲಿ ಬೆಳೆಸಿಕೊಂಡು ಒಳ್ಳೆಯ ಕಲಾತ್ಮಕತೆಯನ್ನು ತಂದುಕೊಟ್ಟಿದೆ.

ಮುಂದಿನ ಕಥಾ ಭಾಗವಾದ ಸೋಲು ಎಂಬ ಕಥೆಯು ಮೇಲೆ ಅವಲೋಕಿಸಿದ ಕಥೆಯ ಸಾಟಿಯಲ್ಲಿಯೆ ಇರುವ ಕಥೆಯ ಹಂದರವು ತನ್ನ ಮೌಲ್ಯವನ್ನು ತನ್ನ ಕಥೆಗಳಲ್ಲಿ ಬಹಳ ಸರಳವಾಗಿ ವ್ಯಕ್ತಗೊಂಡಿರುವುದನ್ನು ನಾವು ಸಾರಸಗಟಾಗಿ ತಳ್ಳಿಹಾಕುವಂತಿಲ್ಲ.

ಮುಂಜಾನೆಯ ಹೊಂಗಿರಣಗಳು ಅಂಚಿನ ಕಿಂಡಿಯಿಂದ ತೂರಿ ಬರುತ್ತಿದ್ದವು. ಊರ್ಧ್ವಮುಖಿಯಾಗಿ ಮಲಗಿದ್ದ ವಿನಯ ಹೊಡೆದ ಹೆಂಚಿನ ಕಿಂಡಿಯನ್ನೆ ದಿಟ್ಟಿಸುತ್ತ ಹಾಸಿಗೆಗೆ

ಅಂಟಿಕೊಂಡಿದ್ದ. ಅವನ ಮುಖದಲ್ಲಿ ಬೇಸರ ಕೌಚಿಕೊಂಡಿತ್ತು. ಎದ್ದು ನೆಟ್ಟಗೆ ನಿಂತ. ಮೈಮುರಿದು ಆಕಳಿಸಿ ಕನ್ನಡಿಯಲ್ಲಿ ಮುಖ ನೋಡಿಕೊಂಡ. ಯಾರು ಇವನು ಅಂತ ಅನುಮಾನಪಟ್ಟ. ಕಿಟಕಿಯಲ್ಲಿ ಕಣ್ಣಿ ಹಾಯಿಸಿದ. ಆಷಾಢದ ಗಾಳಿ ರಸ್ತೆಯ ಮಣ್ಣು ತಂದು ಮನೆಗಳಿಗೆ ತುಂಬುತ್ತಿತ್ತು.

ನೀರು ಮನೆ ಹೊಕ್ಕು ಹಲ್ಲು ಉಜ್ಜುವಾಗ ಯಾಂತ್ರಿಕ ಬದುಕು ಅನಿಸಿ ಪಾಚಿ ಕಟ್ಟಿದ ನೀರು ಮನೆ, ವೃತ್ತ ಪತ್ರಿಕೆಗಳಿಂದ ತುಂಬಿ ಹೋದ ಡೈನಿಂಗ್ ಹಾಲ್ ಎಲ್ಲವನ್ನು ಕ್ಲೀನ್ ಮಾಡುವಂತೆ ಗಡ್ಡದ ಮೇಲೆ ಕೈಯಾಡಿಸಿದ. ತನಗೆ ಪ್ರಿಯಾವೆನಿಸಿದ ವಸ್ತುಗಳ ರಾಶಿ ಕರೆಗಟ್ಟಿದ ಹಾಸಿಗೆ ಮೇಲಿನ ಹೊದುಪು ಅಣಕಿಸಿದಂತಾಗಿ ಮನಸಿಗೆ ಜಡ ಬಡಿದು ಮಂಕಾಗಿ ಕೂತ. ದೂಳು ತುಂಬಿದ ಬೂಟನ್ನು ಬ್ರಷ್ ಮಾಡಬೇಕೆಂದೆನಿಸಿ ಮೂಲೆಯಲ್ಲಿ ಬಿಸಾಕಿದ್ದ ಬೂಟನ್ನು ತಂದು ಕೂಡಲೆ ಸ್ಯಾಕ್ಸಿನ ವಾಸನೆ ರುಮನ್ನು ಆವರಿಸಿದೆ. ರೂಮಿನ ತುಂಬೆಲ್ಲಾ ಜೀಗುಡುತ್ತದ್ದ ನೊಣಗಳು, ಚೆಲ್ಲಿ ಹೋದ ಸಕ್ಕರೆಯ ಮೇಲೆ ಕೂತಿದ್ದುದ್ದನ್ನು ಗಮನಿಸಿ ಚೆಚ್ಚಿ ಸಾಹಿಸಲೆಂದು ಯತ್ನಿಸಿ ಸಾಧ್ಯವಾಗದೆ ಅಸಹಾಯಕನಂತೆ ಗಾಳಿಗೆ ಬೋಲ್ ಮಾಡುವವನಂತೆ ಮುಂಗೈಯನ್ನು ತಿರುಗಿಸುತ್ತಿದ್ದಾಗ ಗಿರೀಶ ಎಂದೊ ಹೇಳಿದ ಮಾತು ತಟ್ಟನೆ ನೆನಪಿಗೆ ಬಂದವು. ಬಳೆಗಳಿಲ್ಲದ ಮನೆಯಲ್ಲಿ ನೊಣಗಳ ಹಾವಳಿ ತಪ್ಪಿದ್ದಲ್ಲ', ಅವನೊಬ್ಬ ಫೂಲ್ ಎಂದುಕೊಂಡ.

ರೂಮಿನ ಭಾಗಿಲು ತೆಗೆದು ಶಬ್ದದೊಡನೆ ಯಾರೊ ಬಂದಂತಾಯಿತು. ಗಕ್ಕನೆ ಎದ್ದು ನಿಂತ ವಿನಯ ನಿರ್ಮಲಳನ್ನು ಕಂಡು ಏನು? ಎನ್ನುವಂತೆ ಕಣ್ಣಾಡಿಸಿದ. ಮೌನದ ನಿರ್ಮಲೆ ಉಪ್ಪಿಟ್ಟು ತುಂಬಿದ ತಟ್ಟೆಯನ್ನು ಮೇಜಿನ ಮೇಲಿಟ್ಟು ತೊಳೆಯದೆ ಬಿದ್ದಿದ್ದ ಲೋಟವನ್ನು ಬೆಳಗಿ ನೀರು ಹಿಡಿದುಕೊಂಡು ಬಂದಳು. 'ಇಂತಹದೆಲ್ಲಾ ಇನ್ನು ಮುಂದೆ ತರಬೇಡ' ಎಂದಾಗ ಆಕೆ ಮುಗ್ಧ ಮಗುವಿನಂತೆ ಆದಳು. ಅವಳ ಮುಂದೆ ತನ್ನ ಒರಟುತನವೆಲ್ಲ ಹಿಂಗಿ ಹೋದಾಗ ಮುಗ್ಧ ಹುಡುಗಿ ಪ್ರಪಂಚ ಅರಿಯದವಳು ಎಂದುಕೊಂಡು ಪಿಯಾನೊ ನುಡಿಸಿದಂತೆ ಕಾಫಿ ತರುವೆನೆಂದು ತೇಲಿ ಹೋದಾಗ ಹೂತ ನೆನೆಪುಗಳೆಲ್ಲ ಉಸಿರು ಕೂಡಿಕೊಂಡವು. 'ಆಡೋಣ ಬರುತ್ತೀಯ ವಿನಯ್' ಎಂದುದೇ ತಡ ತಬ್ಬಿಬ್ಬಾದ ವಿನಯ್. ಯಾವ ಆಟ ಆಡೋಣ ಎಂದು ತಲೆ ತುರಿಸಿಕೊಳ್ಳುತ್ತಿದ್ದಾಗ 'ಮದುವೆಯ ಆಟ' ಎಂದಳು.

ರಂಗು ರಂಗಿನ ಲಂಗ ತೊಟ್ಟ ವಿಜಯ ಎಂದಿಗಿಂತ ಆಕರ್ಷಕವಾಗಿ ಕಂಡಳು. ವಿನಯನೊಡನೆ ಮರಳು ದಿಬ್ಬ ಹತ್ತುತ್ತಿದ್ದ ವಿಜಯ ಮೊದಲು ಕಪ್ಪೆಗೂಡು ಕಟ್ಟೋಣ, ಆಮೇಲೆ ಮದುವೆ ಎಂದು ತನ್ನಷ್ಟಕ್ಕೆ ತಾನು ಗೂಡು ಕಟ್ಟಲು ಶುರು ಮಾಡಿದಳು. ಜೊತೆಯಲ್ಲಿ ತಂದಿದ್ದ ಗಾಳಿಪಟವನ್ನು ಹಾರಿಸಲು ಸಿದ್ಧನಾಗುತ್ತಿದ್ದ ವಿನಯನನ್ನು ಗೂಡು ಎಷ್ಟು ಚೆಂದಾಗಿದೆ ನೋಡು ಬಾ ಎಂದು ಕೂಗಿದಾಗ ಬಾನಿನಲ್ಲಿ ತೇಲುತ್ತಿದ್ದ ಗಾಳಿಪಟವನ್ನೇ ದಿಟ್ಟಿಸುತ್ತಿದ್ದ ವಿನಯ ಚಿರುಮಾತನಾಡದೆ ಇದ್ದುದ್ದನ್ನು ಕಂಡು ಸಿಟ್ಟಿನಿಂದ ಗಾಳಿಪಟವನ್ನು ಕಿತ್ತುಬಿಟ್ಟಳು.

ಹಿಗ್ಗಿನಿಂದ ತೇಲಿಹೋಗುತ್ತಿದ್ದ ವಿನಯ ಕುಗ್ಗಿಹೋದ. ಆವೇಶದಲ್ಲಿ ಮರಳಿನ ಮನೆಯನ್ನು
ಲಸಮ ಮಾಡಿ ಈಗ? ಅನ್ನುವಂತೆ ದುರುಗುಟ್ಟಿ ನೋಡಿದಾಗ ಒಂದು ತರ ಹಟಮಾರಿ
ಡುಗಿ ಅನಿಸುತ್ತಿದ್ದಂತೆ ಕಾಫಿಯ ಗ್ಲಾಸಿನೊಡನೆ ಆತ್ಮೀಯ ನಗೆ ಚೆಲ್ಲುತ್ತ ತುಂಬಿದ ಕೆರೆಯ
ಲೆ ಬೀಸಿ ಬಂದ ತಂಗಾಳಿಯಂತೆ ಬಂದವಳು. ಅಚ್ಚರಿಯಂತೆ ಹೊಸಲ ಬಳಿಯೆ ನಿಂತು
ಯಾಕೆ ನೀವು ಒಂದು ತರ, ಬೇಸರವೇನು? ಇಷ್ಟವಿಲ್ಲದ್ದಿದ್ದರೆ ನೇರವಾಗಿ ಹೇಳಿಬಿಡಬಹುದಲ್ಲ
ಂತ ಕಡ್ಡಿ ತುಂಡಾದಂತೆ ಮಾತನಾಡುತ್ತಾಳೆ. ಅವಳ ಮಾತು ಚೂಪನೆಯ ಸರಳುಗಳು
ಾಕಿದಂತೆ ಅಸಾಧ್ಯ ನೋವು ತರುತ್ತದೆ. ಉತ್ತರಿಸಲಾರದ ಪ್ರಶ್ನೆಗೆ ಉತ್ತರ ಹೇಳುವಂತೆ
ಟಗಟನೆ ತಣ್ಣಗಾದ ಕಾಫಿಯನ್ನು ಗುಟುಕಿಸಿದ. ನಾವಿಬ್ಬರು ಒಂದೇ ಎಂಬ
ನೋಧರ್ಮದವರು ಎಂದು ಅನಿಸಿ ತನ್ನ ಭಾವನೆಗಳನ್ನು ಪೂರ್ಣವಾಗಿ ಅರ್ಥ
ಾಡಿಕೊಳ್ಳಬಲ್ಲಳು ಎಂದು ಅರಿತು ನಿರ್ಮಲ ಅನಿಸಿದ್ದನ್ನು ಆಡು. ನನ್ನ ಬಗ್ಗೆ ನಿನಗೇನು
ನಿಸುತ್ತದೆ ಅಂತ ತೆರೆದು ಆಡು. 'ಅನಿಸಿದ್ದನ್ನು ಆಡುವವರೇ ನನಗೆ ಮೆಚ್ಚುಗೆ' ಯಾಕೀತರ
ೇಳುತ್ತೀದ್ದೀರಿ ನನಗೇನು ತೋಚುತ್ತಿಲ್ಲ. ನಾನು ನಿಮ್ಮನ್ನು........ ಎಂದು ತೊದಲಿದಳು. ಅವಳು
ಂತೇ ಇದ್ದುದ ಗಮನಿಸಿ ಸ್ಥಳ ಮಾಡಿಕೊಡಲು ಕುರ್ಚಿಯ ಮೇಲಿದ್ದ ಪುಸ್ತಕವನ್ನು ತೆಗೆದು
ನಗೆ ಗೊತ್ತು ನಿನ್ನದು ಪರಿಶುದ್ಧ ಮನಸ್ಸು. ನಿನ್ನೊಡನೆ ಇದ್ದಾಗ ಆತ್ಮೀಯರೊಬ್ಬರು
ೂರಕಿದಷ್ಟು ಆನಂದವಾಗುತ್ತದೆ. ನಿನಗೆ ಬಿಡುವು ಸಿಕ್ಕಾಗ ನನ್ನ ಆಫೀಸಿನತ್ತ ಬನ್ನಿ. ಈಚೆಗೆ
ಫೀಸು ಎಂದರೆ ಉಸಿರು ಕಟ್ಟಿದಂತಾಗುತ್ತದೆ ಎಂದು ಪ್ರಾರ್ಥನೆ ಸಲ್ಲಿಸಿದಂತ ಮುಖ
ಾಡಿಕೊಂಡು ಎದ್ದು ಹೋದಳು.

ಈ ಮೇಲಿನ ಕಥೆಯಲ್ಲಿ ವಿನಯ ನಿರ್ಮಲಳನ್ನು ಅಂತರಂಗಪೂರ್ಣವಾಗಿ ಪ್ರೀತಿಸಿದ್ದರು
ವಳು ಕೈತಪ್ಪಿ ಹೋಗುತ್ತಾಳೆ. ಆದರೆ ನಿರ್ಮಲಳು ಅವನ ಪಾಲಿಗೆ ದಕ್ಕುವ ಸೂಚನೆ
ೂರವಾದಾಗ ಅವನ ಮನಸ್ಸು ಕದಡುತ್ತದೆ. ಅದಕ್ಕೆ ಬೇರೆ ಬೇರೆ ಕಾರಣಗಳು ಅಡಚಣೆಯನ್ನು
ಡ್ಡತ್ತವೆ. ಒಂದು ಕಾರಣವನ್ನು ನೋಡುವುದಾದರೆ ವಿಜಯಳನ್ನು ಪ್ರೇಮಿಸಿ ಕೊನೆಗೆ ಅವಳ
ೀವನದ ಜೊತೆ ಕೆಲ ಕಾಲ ಕಳೆದು ನಂತರ ಅವಳನ್ನು ದೂರ ಮಾಡಿದುದು. ಇದರಿಂದ ಕೆಲವು
ಲ ವಿನಯನು ನೆಮ್ಮದಿ ಕಳೆದುಕೊಂಡು ನಿರ್ಮಲಳಿಗೆ ಹೃದಯದಲ್ಲಿ ಜಾಗ ನೀಡಿ ಅವಳು
ಕ್ಕು ಸೂಚನೆ ಕಡಿಮೆಯಾದಾಗ ಈ ಇಬ್ಬರ ನಡುವೆ ನಾಯಕನ ಮನಸ್ಸು ಸಿಕ್ಕಿ
ೂಜಲಾಗುತ್ತದೆ.

ತನ್ನನ್ನು ಕಾಡುವ ಭಾವನೆಗಳಿಂದ ಬಿಡಿಸಿಕೊಳ್ಳಲಾಗದೆ ಅವನು ಪೇಚಾಡುತ್ತಾನೆ.
ರ್ಮಲಳನ್ನು ಕೊನೆಯಲ್ಲಿ ಸಂಧಿಸಿದಾಗ ಇಬ್ಬರ ನಡುವೆ ನಡೆಯುವ ಸಂಭಾಷನೆ
ಾರ್ಮಿಕವಾದುದು. ಕೊನೆಯಲ್ಲಿ ಹೇಳು ವಿನಯ್ ನಿನಗೆ ನಾನು ಬೇಕೊ? ಇಲ್ಲ ಈ ಪತ್ರ---

-- "One Loves Only Ones in Ones Life" 'ನನಗೆ ಆಪತ್ರವೇ ಬೇಕು'. ಅಂದಾಗ
ಾಗರಹಾವಿನಂತೆ ಬುಸುಗುಡುತ್ತ ಮನೆ ಮುಟ್ಟಿದಳು.

ರೇಡಿಯೊ ಸುದ್ದಿ ಬಿತ್ತರಿಸುತ್ತಿದ್ದಾಗ ಕಾಫಿಯನ್ನು ಗುಟುಕಿಸುತ್ತಿದ್ದಳು. ಎಂದಾಗ ಏರಿಳಿತ
ನಿಯಲ್ಲಿ "ಲೂನ-೧೫" ಚಂದ್ರನಿಗೆ ಡಿಕ್ಕಿ ಹೊಡೆದು ಇರಬಹುದೆಂದಾಗ ಗಂಟಲಿನಲ್ಲಿದ್ದ ಕಾಫಿ
ೂರಗೆ ಬಂತು. ಕೈಯಲ್ಲಿದ್ದ ಲೋಟ 'ಫಳ್' ಅಂತ ನೆಲದ ಮೇಲೆ ಬಿದ್ದಾಗ ಅಡಿಗೆ ಮನೆಯಿಂದ
ಹಾಳು ಮಾಡಿಬಿಟ್ಟೆಯಲ್ಲೊ. ನಿನ್ನ ಕೈಗೆ ಸಿಕ್ಕಿದ್ದು ಯಾವುದು ಉದ್ಧಾರವಾಗುತ್ತದೆ ಹೇಳು"
ಂದಾಗ ಕುಸಿದು ಹಿಡಿತ ತಪ್ಪಿದ ಕಪ್ಪು ಸಾಸರಿನ ಚೂರುಗಳನ್ನು ಹೆಕ್ಕಿದಳು. ಸಾಸರ್
ಡೆದುಹೋಗುವ ಪ್ರತಿಮೆಯೊಂದರ ಮೂಲಕ ಭಗ್ನ ಪ್ರೇಮವನ್ನು ಸಂಕೇತಿಸಿರುವುದು ಕಥೆಗೆ
ಲಾತ್ಮಕ ಮುಕ್ತಾಯವನ್ನು ತಂದುಕೊಡುತ್ತದೆ.

ಮತ್ತೊಂದು ಕಥೆಯಾದ ಅಸಂಗತ ಎನ್ನುವ ಕಥೆಯ ನಾಯಕ ಅನಂತ.
ದಿನ ಪತ್ರಿಕೆಯ ಸಾವಿರಾರು ಸುದ್ಧಿಗಳಲ್ಲೊಂದು..
ನಗರದ ಉದ್ಯಾನವನದಲ್ಲಿ ಯುವತಿಯೊಬ್ಬಳ ಬೆತ್ತಲ ಶವ!
ಅಕ್ರಮವಾಗಿ ದೇಹದ ಮೇಲೆ ದಾಳ ನಡೆಸಿದ್ದೆ ಸಾವಿಗೆ ಕಾರಣ ಎಂದು ತಜ್ಞ ವೈದ್ಯರ
ಅಭಿಪ್ರಾಯ. ಪೋಲೀಸರು ತನಿಖೆ ನಡೆಸುತ್ತಿದ್ದಾರೆ.

ಪಾಲಿಗೆ ಬಂದುದು ಪಂಚಾಮೃತಾ ಅಂದುಕೊಂಡು ಆಳೆತ್ತರದ ಮರದ ಬೀರುವಿನಲ್ಲಿದ್ದ
ಹಳೆಯ ಫೈಲುಗಳನ್ನು ಮೇಜಿನ ಮೇಲೆ ಗುಡ್ಡೆ ಹಾಕಿಕೊಂಡು ಅದರಲ್ಲಿ ಹೂತು ಹೋದ
ಾಕರಿಕೆ ಬರುವ ನಾಥಕ್ಕೆ ಒಗ್ಗಿಹೋಗಿದುದ್ದರಿಂದ ಸಂಪಿಗೆಯ ಹೂವು ಮುಡಿದ ಸರೋಜ
ತಲೆನೋವು ತಲುಪಿದಳು. ಎದುರು ಬದಿರಾಗಿ ಇಬ್ಬರು ಕುಳತುಕೊಂಡರೆ ಬಾಸ್ಗೇನು ಗಂಟು
ಹೋಗುತ್ತದೆಯೆ ಅಂದುಕೊಂಡು ಈಸಲಾಗದೆ ಹೆಂಡತಿಯನ್ನು ಅಪ್ಪನ ಮನೆಗೆ ಹಟ್ಟಿ ಪದೇ
ಪದೇ ಮೇಜಿನ ಮೇಲಿರುವ ಕರೆಗಂಟೆಯನ್ನು ಹೊತ್ತಿ ಸರೋಜಳನ್ನು ಕರೆಯುವುದೇ ತಡ,
ಅವಳು ಆಫೀಸು ಇದು ಎನ್ನುವ ಪ್ರಜ್ಞೆಯು ಇಲ್ಲದೆ ಹಾವಾಗಿ ಹೋಗುವಾಗ ಅನಂತ ಲೆಕ್ಕತಪ್ಪಿ
ಮುಗ್ಗುರಿಸುತ್ತಿದ್ದ.

ಭಾರತೀಯ ಸಂಸ್ಕೃತಿ, ಆಧ್ಯಾತ್ಮಿಕ ಪರಂಪರೆ, ಧರ್ಮ, ಆಚಾರ, ವಿಚಾರ, ನೀತಿಗಳ
ಾದಿಯನ್ನು ಸೋಸುತ್ತಿದ್ದರು. ಇಂದಿನ ರಾಷ್ಟ್ರದಲ್ಲಿ ರಾರಾಜಿಸುತ್ತಿರುವ ಅರಾಜಕೀಯ ಅಶಿಸ್ತು,
ಅತೃಪ್ತಿ, ಸಮಾಜದ ನೈತಿಕ ಮತ್ತು ಆಧ್ಯಾತ್ಮಿಕ ಮೌಲ್ಯಗಳ ಅದಃಪತನಕ್ಕೆ ಕಾರಣ ಹೇಳುತ್ತಿದ್ದರು.
ಫಿಲಾಸಫಿ ಬೋರ್ ಎನಿಸಿ ಅನಾಚಾರ ನಾಟಕಕ್ಕಾದರು ಹೋಗೋಣ ಅಂತ ಹೊರಟ
ಅನಂತನಿಗೆ ಆತ್ಮ ಗಂಟುಬಿದ್ದ. ಬಾವಿಯೊಳಗೆ ಇದ್ದುಕೊಂಡು ಇದಿಷ್ಟೆ ಬದುಕು ಅಂದರೆ

ಾಲದು. "Life is Sort Make it Sweet" ಎಂದು ಬಾಯಲ್ಲಿ ಆಡಬಾರದ ಆಡಿಕೊಂಡು ತಲೆನೋವು ತಂದುಕೊಂಡ. ಊರು ಮೊದಲಿದ್ದಂತೆ ಇಲ್ಲ, ಪೂರ್ಣವಾಗಿ ಬದಲಾಗಿ ಬಿಟ್ಟಿದೆ. ನಾಲ್ಕು ಅಂಗಡಿಗಳು, ಮೂರು ಹೋಟೆಲ್‌ಗಳು, ವಿದ್ಯುದ್ ದ್ವೀಪಗಳು ಇಷ್ಟು ಸಣ್ಣ ಊರಿಗೆ ಹದಿನೈದು ರೇಡಿಯೊಗಳು ಅಂದರೆ ಸಾಮಾನ್ಯವೇ? ಎಂದೆಲ್ಲಾ ರೀತಿಯಲ್ಲಿ ಯೋಚಿಸುತ್ತ ಎಚ್ಚರವಾದಾಗ ಅನಂತನಿಗೆ ವಿಸ್ಮಯ ಕಾದಿತ್ತು. ರೂಮಿನಲ್ಲಿ ಜೋಡಿಸಿಟ್ಟ ವಸ್ತುಗಳು ಚದುರಿ ಹೋಗಿದ್ದವು. ಆಶ್ಚರ್ಯದಿಂದ ಮೇಜು-ಕುರ್ಚಿಗಳನ್ನು ಸರಿಸಿ ಬಾಗಿಲು ತೆರೆದು ದಿನ ಪತಿಕ್ರೆಯನ್ನು ಎತ್ತಿಕೊಂಡು ಹೊರಗೆ ಬಂದ. ರಸ್ತೆಯಲ್ಲಿ ತುಂಬಿದ ಪಾದಚಾರಿಗಳು, ಬಸ್ಸುಗಳು, ಕಾರುಗಳು ಎಂದಿನಂತೆಯೆ ಅಂಬಿಕಾ ಮಲ್ಲಗೆ ಹೂವು ಕೂಯ್ಯುತ್ತಿದ್ದಳು. ಇಲ್ಲಿ ಮೇಲೆ ತಿಳಿದಂತೆ ಜನವು ನಿಯಮಕ್ಕೆ ಹೊಂದಿಕೊಂಡು ಚಾಚುತಪ್ಪದೆ ನಡೆಯುತ್ತಿರುವ ಯಾಂತ್ರಿಕ ಬದುಕು ತಥ್ ಎನಿಸಿ ಈ ಹೊಂದಾಣಿಕೆ ಹೇಗೆ ಸಾಧ್ಯವಾಯಿತು ಅಂತ ಚಿಂತಿಸಿದ. ಸಿಗರೇಟು ಅತ್ತಿಸಿ ಸುರಳ ಬಿಟ್ಟು ಯಾವುದೊ ತಾಳಕ್ಕೆ ಹೆಜ್ಜೆ ಹಾಕಿ ನಡೆದ.



ಬದುಕಿನ ಅನೇಕ ಕಹಿ ಘಟನೆಗಳು ಅವನ ಪಾಲಿಗೆ ಅಸಂಗತವಾಗಿ ಮೂಢಿಬರುತ್ತವೆ. ಇತ್ತ ಸರೋಜ ಮತ್ತೊಂದು ಕಡೆ ಅಂಬಿಕ ಸರೋಜ ತನ್ನ ಕಛೇರಿಯಲ್ಲಿ ಟೈಪಿಸ್ಟ್ ಅಂಬಿಕ ತನ್ನ ಕೊಠಡಿಗೆ ಸಮೀಪದ ಎದುರು ಮನೆಯವಳು. ಇಲ್ಲಿ ಮೊದಲ ಎರಡು ಕಥೆಗಳಗಿಂತ ವಿಸ್ಮಿತ ಹೊಂದಿರುವ ಈ ಕಥೆ ಸಮಾಜದ ಅನೇಕ ಬಗೆಯ ವಿಷಮತೆಯನ್ನು, ವ್ಯಥ್ರತೆಯನ್ನು ಹೆಚ್ಚಾಗಿ ಪ್ರಸ್ತಾಪಿಸುತ್ತದೆ. ಇಲ್ಲಿ ಹುಲ್ಲುಕೆರೆಯವರು ಅಸಂಗತ ಕಥೆಯನ್ನು ತಮ್ಮ ಭಾಷಾ ಕೌಶಲದಲ್ಲಿ ಸೃಜನಾತ್ಮಕತೆಯನ್ನು ವ್ಯಕ್ತಪಡಿಸಿರುವುದು ನಮಗೆ ಅರಿವಾಗುತ್ತದೆ.

ಅನಂತನ ಕೊಠಡಿಗಳ ಮೇಲೆ ಗೂಂಡಗಳ ದಾಳಿ, ದಾರಿಯಲ್ಲಿ ರೌಡಿಯೊಬ್ಬ ಗೃಹಸ್ತ ಮಹಿಳೆಯನ್ನು ಕೆಣಕುವ ಗೊಂದಲಮಯ ಬದುಕಿನಿಂದ ಬಿಡುಗಡೆ ಹೊಂದಿ ಪ್ರಶಾಂತನಾಗಿ ತನ್ನ ಹುಟ್ಟೂರಿಗಾದರು ಹೋಗೋಣವೆಂದರೆ ಅಲ್ಲಿ ಗಡಸು ನಡತೆಯ ತಂದೆ. ತನಗಿಷ್ಟವಿಲ್ಲದ್ದಿದ್ದರು ಹತ್ತಿರದ ಬಂದು ಚಿಕ್ಕಸ್ವಾಮಿಗೌಡರು ಮಗಳನ್ನು ಮದುವೆಯಾಗುವಂತೆ ಒತ್ತಾಯಿಸುವ ತಾಯಿ, ಜನರ ಮೌಢ್ಯದ ಮೇಲೆ ಆಟವಾಡುತ್ತ ಶೋಷಣೆ ಮಾಡುವ ಶನಿ ಮಹಾತ್ಮನ ಪೂಜಾರಿ ಹೀಗಾಗಿ ಊರನ್ನು ಬಿಟ್ಟು ಓಡಿ ಬರಬೇಕಾದ ಸ್ಥಿತಿಯನ್ನು ಅನಂತ ಎದುರಿಸಬೇಕಾಯಿತು. ಅಂತರಂಗದಲ್ಲಿ ಎಲ್ಲೊ ಅಂಬಿಕಾಳ ಬಗ್ಗೆ ಒಲವಿನ ಕಿರಣಗಳು ಮದರುವಾಗ ಬಿದ್ದ ಕನಸು ಇತ್ತ ಟೈಪಿಸ್ಟ್ ಸರೋಜಳಿಗು ಕರಾಳ ದೃಷ್ಟಿಯ ಸಾಹೇಬನಿಂದ ಬಿಡುಗಡೆ, ಏನನ್ನು ಸಾಧಿಸಲು ಸಾಧ್ಯವಾಗದೆ ನೀರನ್ನು ತೊರೆದು ಮೀನು ವಿಲವಿಲ ಎನ್ನುವ ಅನಂತ ಎಚ್ಚರವಾದಾಗ ಅನಂತನಿಗೆ ವಿಸ್ಮಯ ಕಾದಿತ್ತು. ಈ ಅಂಶಗಳನ್ನೆಲ್ಲಾ ತನ್ನ ಆತ್ಮ ವಿಮರ್ಶೆಗೆ ಒಳಪಡಿಸಿಕೊಳ್ಳುತ್ತಾನೆ. ನಿಕಟವಾದ ಅಟ್ಟಹಾಸವೊಂದು ಅರ್ಥಪೂರ್ಣವಾದ ರೀತಿಯಲ್ಲಿ ಆದುಹೋಗುತ್ತದೆ.

ಈ ಮೇಲಿನ ಮೂರು ಕಥೆಗಳಲ್ಲಿ ದೃಷ್ಟಿ ಧೋರಣೆ ಒಂದೆ. ನಾಯಕನ ವ್ಯಕ್ತಿತ್ವದಲ್ಲಿ ಕಂಡಿಬರುವ ಸ್ವಭಾವ ವೈಚಿತ್ರ್ಯವು ಒಂದೆ. ಅನ್ಯ ಸ್ತ್ರೀ ಪಾತ್ರಗಳ ನಡುವೆ ತೊಳಲುತ್ತ ತುಡಗುತ್ತ ನಾಯಕ ಎಲ್ಲೆಡೆಯು ಸೋಲುವುದು ಇಲ್ಲಿನ ಮುಖ್ಯ ಸೂತ್ರ. ಆದರೆ ವಿಸ್ತಾರ ಮತ್ತು ವೈವಿದ್ಯದ ದೃಷ್ಟಿಯಿಂದ ಅಸಂಗತ ಕಥೆಯು ಉಳಿದೆರಡು ಕಥೆಗಳಿಗಿಂತ ಶ್ರೇಷ್ಠವಾದುದು ಸುಂದರವಾದುದು.

ಹುಲ್ಲುಕೆರೆಯವರ ನಿಜವಾದ ಸಾಹಿತ್ಯದ ಶಕ್ತಿ ಗೋಚಾರವಾಗಿರುವುದು ಅವರು ಬರೆದಿರುವ ಗ್ರಾಮೀಣ ಪರಿಸರದ ಕಥೆಗಳಲ್ಲಿ. ಅಸಂಗತವು ಬಹುಮಟ್ಟಿಗೆ ಗ್ರಾಮೀಣ ಪರಿಸರದ ಬೆನ್ನಿನಲ್ಲಿಯೆ ಹಬ್ಬಿದರು ಅದರ ಪ್ರಧಾನಕ್ರಿಯೆ ನಗರ ಜೀವನದಲ್ಲಿಯೆ ಬೇರು ಬಿಟ್ಟಿದೆ. ಶನಿಮಾತ್ಮನ ದೇವಸಾಥನದಲ್ಲಿ ಕಲೆತ ಮುಗ್ಧ ಭಕ್ತರು ದೇವರು ಮೈಮೇಲೆ ಬಂದಂತೆ ನಟಿಸಿ, ಜನರಲ್ಲಿ ಸುಲಿಗೆ ಮಾಡುವ ಗುಡ್ಡ, ವಿದ್ಯಾವಂತ ಯುವಕನೊಬ್ಬನನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಲು ಅಸಮರ್ಥರಾದ ಹಳ್ಳಿಯ ಮುಗ್ಧ ತಂದೆ-ತಾಯಿಗಳು ಇಂತಹ ವಿಷಯಗಳಲ್ಲಿ ಹೊಸ ಅನುಭವವನ್ನು ತಂದುಕೊಡಲು ಸಮರ್ಥವಾಗಿದೆ ನಿಜ. ಆದರೆ ಸಂಪೂರ್ಣವಾಗಿ ಗ್ರಾಮೀಣ ಪ್ರದೇಶದಲ್ಲಿ ಜನಪದ ಜೀವನದ ಸಿಹಿ ಕಹಿಗಳನ್ನು ತುಂಬಿಕೊಂಡು ಸೃಷ್ಟಿಗೊಂಡಿರುವ ಸಾಕ್ಷಿ, ಸಿದ್ಧತೆ, ಸ್ಥಿತಿ ಮತ್ತು ಆಕ್ರಮಣ ಕಥೆಗಳು ಮಂಡ್ಯ ಜಿಲ್ಲೆಯ ಪ್ರಾದೇಶಿಕ ಸೊಗಡನ್ನು ಧರಿಸಿದ ವಿಶಿಷ್ಟ ಕಥೆಗಳಾಗಿವೆ. ವಿಶ್ವೇಶ್ವರ ನಾಲೆಯ ಹೊರ ಪ್ರಸಾದದಿಂದ ಈ ಭಾಗದ ಹಳ್ಳಿಗಳು ಶ್ರೀಮಂತಿಕೆಯ ನೆಲೆಗಳಾಗಿ ಮೇಲ್ನೋಟಕ್ಕೆ ಕಂಡುಬಂದರು ಬಡತನ, ಅಜ್ಞಾನ, ಕಂದಾಚಾರಗಳ ಬೀಡಾಗಿದೆ ಎಂಬುದನ್ನು ಮರೆಯುವಂತಿಲ್ಲ. ಈ ಭಾಗದ ವಸ್ತುವನ್ನು ತನ್ನ ಕಥೆಗಳಿಗೆ ಆಯ್ಕೆ ಮಾಡಿಕೊಳ್ಳುವ ಲೇಖಕ ಆ ಪರಿಸರದಲ್ಲಿಯೆ ಹುಟ್ಟಿಬೆಳೆದು ಆ ಪರಿಸರದಲ್ಲಿಯೆ ಬದುಕಿದವನಾಗಿದ್ದರೆ ಇಂತಹ ರಚನೆಗಳ ಸತ್ವ ಸಾಮಾನ್ಯವಾಗಿ ಸಹಜವಾಗಿ ಮೂಡುತ್ತದೆ.

ಹಸಿ ಹಸಿಯಾದ ಅನುಭವಗಳನ್ನು ಲೇಖಕ ವರದಿ ಮಾಡಿದಾಗ ಅದು ಕಲೆಯಾಗುವುದಿಲ್ಲ. ಆದರೆ ಜನಜೀವನದ ಆಳ ಆಳಕ್ಕೆ ಇಳಿದು ಅಲ್ಲಿನ ನೋವು ನರಳಾಟಗಳಲ್ಲಿ ಪಾಲ್ಗೊಂಡು ಅವರ ಆಚಾರ, ವಿಚಾರ, ವ್ಯವಹಾರ, ಆಹಾರ, ಪಾನೀಯಗಳೊಡನೆ ತನ್ನನ್ನು ಐಕ್ಯ ಮಾಡಿಕೊಂಡು ಪಡೆದ ಜೀವನ ದರ್ಶನವನ್ನು ಕಲೆಯಾಗಿ ನೀಡುವ ಸಾಮಾಥ್ಯವನ್ನು ಬೆಳೆಸಿಕೊಂಡರೆ ನಮ್ಮ ಸಾಹಿತ್ಯ ಸಾರಪೂರ್ಣವಾದ ಹೊಸ ಅಲೆಯತ್ತ ಆಶಾ ದೃಷ್ಟಿಯಿಂದ ನೋಡಬೇಕಾದ ರಚನೆಗಳು ಹುಟ್ಟಿ ಬರುತ್ತವೆ. ರಮೇಶ ಹುಲ್ಲುಕೆರೆಯವರ ಕಥೆಗಳು ಇಂತಹ ಹೊಸ ಸೃಜನಾತ್ಮಕತೆಯನ್ನು ನಿಜಕ್ಕೂ ಉಳಿಸಿಕೊಂಡಿವೆ.

ಮತ್ತೊಂದು ನೆಲೆಗಟ್ಟಿನ ಆಧಾರದಲ್ಲಿ ರಚನೆಯಾಗಿರುವ ಸಿದ್ಧತೆ ಎಂಬ ಕಥೆಯಲ್ಲಿ ಗಿರಿ ಎಂಬ ವ್ಯಕ್ತಿಯು ಕಥೆಯ ಕೇಂದ್ರ ಶಕ್ತಿಯಾಗಿ ಉದ್ದಕ್ಕೂ ಕಂಡು ಬರುತ್ತಾನೆ. ಚಿಕ್ಕಂದಿನಿಂದಲೆ ತಬ್ಬಲಿಯಾದ ಅವನು ಅಕ್ಕನೊಡನೆ ಪಡೆದ ಆಶ್ರಯದಲ್ಲಿ ಬೆಳೆಯುತ್ತಿರುತ್ತಾನೆ. ಒಂದು ಸಲ

ನಿದ್ರೆಯ ಜೋಂಪಿನಲ್ಲಿ ತಿಗಣೆಗಳು ಎದೆಯಿಂದ ಹೊಟ್ಟೆಗೆ ಹೊಕ್ಕಿದಾಗ ಗಿರಿ ಹೆಚ್ಚರಗೊಂಡು ಕನಸಿನಲ್ಲಿ ಚೌಡಿಯ ಜೊತೆಯಲ್ಲಿದ್ದ. ಈ ಊರಿಗೆ ಬರುವ ಮೊದಲು ಅವನಿಗೆ ಯಾವಿದೇ ರೀತಿಯ ಅನುಭವದ ಬುದ್ಧಿ ಇದ್ದಂತೆ ಕಾಣಲಿಲ್ಲ. ಚೌಡಿಯು ಇವನನ್ನು ಕೆಟ್ಟದ್ದಾಗಿ ಬಳಸಿಕೊಂಡು ದಾರಿ ತಪ್ಪಿಸುತ್ತಾಳೆ. ಆರಂಭದಲ್ಲಿ ಹೆಂಡತಿಯನ್ನು ಕಳೆದುಕೊಂಡವನು ಇತರರ ತಿರಸ್ಕಾರಕ್ಕು ಗುರಿಯಾಗುತ್ತಾನೆ. ಹೀಗಿರುವಾಗ ಹೊರಗಡೆ ಭೂಮಿ ಕೊಚ್ಚು ಮಳೆ, ಮಿಂಚು, ಗುಡುಗು, ಬಿರುಗಾಳಿ, ಆರ್ಭಟಕ್ಕೆ ತತ್ತರಿಸಿ ಏದುಸಿರು ಬಿಡುತ್ತಿದ್ದ ಗುಡಿಸಲು, ಬೆತ್ತಲಾದ ಕತ್ತಲು ಬಾಚಿ ತಬ್ಬಿಕೊಂಡಂತೆ ನೊಚ್ಚಗೆ ಒತ್ತಿದಂತಾಗಿ ಬಿಸಿ ಉಸಿರಿನ ವಾಸನೆ ಸುತ್ತ ಆವರಿಸಿಕೊಂಡಿತು.

ಎತ್ತಿ ಕುಕ್ಕಿದಂತಾದ ಗಿರಿ ಎದ್ದು ಕುಂತ. ಇಲ್ಲೆಲ್ಲೊ ಸಿಡಿಲು ಬಡಿದಿರಬೇಕು ಎಂದುಕೊಳ್ಳುವಾಗ ಬೆದರಿದ ಎಮ್ಮೆಗಳ ಗೂಟ ಕಿತ್ತುಕೊಂಡು ಅರಚಿಕೊಂಡವು. ಜಗ್ಗುತ್ತಿದ್ದ ಗುಡಿಸಲನ್ನು ಗಮನಿಸುತ್ತ ಅಸಹಾಯಕನಾಗಿ ಕುಕ್ಕರಗಾಲಲ್ಲಿ ಕೂತು ಮಂಡಿಗೆ ಗಡ್ಡ ಸಿಕ್ಕಿಸಿಕೊಂಡು ನಿಟ್ಟುಸಿರುಬಿಟ್ಟ. ಬೆನ್ನ ಸುತ್ತ ಯಾರೊ ನಗುತ್ತಿದ್ದಾರೆಂಬ ಗುಮಾನಿ ಹುಟ್ಟಿತು. ದುಃಖ ಚಾಚಿಕೊಂಡುಬಂದು ಬಿಕ್ಕಿ ಬಿಕ್ಕಿ ಅತ್ತ. ಬದುಕು ವ್ಯರ್ಥ ಅನಿಸಿತು. ಏನೇನೊ ಆಸೆಗಳಿಗೆ ಕಾವು ಕೊಟ್ಟ ನಾಗಿ ಚೊಚ್ಚಲು ಹೆರಿಗೆಯಲ್ಲಿ ಕಣ್ಣು ಮುಚ್ಚಿಕೊಂಡ ಮೇಲೆ ಅತ್ತಗೆ ತನ್ನಿಂದ ಯಾವ ಆಸ್ತಿಯು ಸಿಕ್ಕುವುದಿಲ್ಲ ಎಂದು ಅರಿತು ಯಾಕೆ ಇಷ್ಟು ಕ್ರೂರವಾಗಿ ನಡೆದುಕೊಂಡಳು. ಹೀಗೆ ನಾನಾ ರೀತಿಯಲ್ಲಿ ಯೋಚಿಸಿ ಸೋರುವ ಗುಡಿಸಿಲಿನಲ್ಲಿ ಕುಳಿತ ಗಿರಿಯ ಕಥೆಗಿಂತ ಇಲ್ಲಿ ಮರಿಯಪ್ಪನವರ ಸಂಸಾರದಲ್ಲಿ ತೊಡರಿಕೊಂಡಿರುವ ಹಲವು ಸಮಸ್ಯೆಗಳು ವಿಲಾಸಿಯಾದ ಮಗ, ಚಿಕ್ಕಸ್ವಾಮಿಯ ರಸಿಕತೆ, ಹೆರಿಗೆಯ ತೊಂದರೆಯಲ್ಲಿ ಸಂಕಟದಲ್ಲಿ ತೊಂದರೆ ಪಡುತ್ತಿದ್ದ ಚಿಕ್ಕಸ್ವಾಮಿಯ ಮಡದಿಯ ಮುಂತಾದ ವಿವಿಧ ಮಜಲುಗಳಿಂದ ಈ ಕಥೆ ರಂಜನೆಯನ್ನು ಒದಗಿಸುತ್ತದೆ. ಮರಿಯಪ್ಪನವರ ಮನೆಯಲ್ಲಿದ್ದ ಗಿರಿ ಚಿಕ್ಕಸ್ವಾಮಿಯ ಮೇಲಿನ ದ್ವೇಷದಿಂದ ಆ ಮನೆಗೆ ಕಾಲಿಡದೆ ದೂರವಾಗಿ ನಿಲ್ಲುತ್ತಾನೆ. ಆದರೆ ಕಷ್ಟದ ರಾತ್ರಿಯಲ್ಲಿ ಅವನ ನೆರವು ಅನಿವಾರ್ಯವಾಗಿ ನೆರೆವರೆಲ್ಲಾ ಪೀಡಿಸಿದರು ಒಪ್ಪದ ಅವನ ಕಷ್ಟ ಕೈಮೀರಿದಾಗ ಮರಿಯಪ್ಪನವರೇ ಬಂದು ಅವನನ್ನು ಕರೆದಾಗ ಅಂತಃಕರಣ ಕರಗಿ ಎಳನೀರು ತರಲು ರಾತ್ರಿಯಲ್ಲಿ ತೋಟವನ್ನು ಹೊಕ್ಕವನು, ಕಾಲು ಜಾರಿ ಅಪಮೃತ್ಯುವನ್ನು ಅಪ್ಪುತ್ತಾನೆ. ಕಥೆ ದುರಂತದಲ್ಲಿ ಪರ್ಯಾವಸಾನ ಹೊಂದುತ್ತದೆ.

ಮೇಲಿನ ಕಥೆಯಲ್ಲಿ ಬರುವ ಕಥೆಗಳು ಗಿರಿಯ ವ್ಯತಿರಿಕ್ತವನ್ನು ಬೇರೆ ಬೇರೆಯವರ ಬಾಯಿಯಲ್ಲಿ ಆಡಿಸುವವರ ಜೊತೆ ಅವನ ಪಾತ್ರದ ಪರಿಚಯವನ್ನು ಆಳವಾಗಿಸುತ್ತಾ ಹೋಗುತ್ತದೆ. ಮರಿಯಪ್ಪನವರ ವ್ಯಕ್ತಿತ್ವವು ಇಲ್ಲಿ ಗಂಭೀರವಾಗಿ ಪರಿಗಣಿಸಲ್ಪಡುತ್ತದೆ. ಗ್ರಾಮವೊಂದರ ಒಡಲಲ್ಲಿ ಏನೆಲ್ಲಾ ಸ್ವಭಾವದ ವ್ಯಕ್ತಿಗಳು ಸುಳಿದಾಡಿ ಆ ಜೀವನದ ನಾಡಿಯನ್ನು ಹಿಡಿಯಬಲ್ಲರು ಎಂಬುದನ್ನು ಈ ಕಥೆ ಸ್ವಾರಸ್ಯವಾಗಿ ಮೂಡಿಸಿ ಗಿರಿಯ ದುರಂತ, ಅವನ

ಸ್ವಾಮಿಯ ನಿಷ್ಠೆಯ ಪ್ರತೀಕ, ಮಳೆಯಿಂದಾದ ಕೆಸರಿನಲ್ಲಿ ನೆನೆದ ತೆಂಗಿನಮರವನ್ನು ರಾತ್ರಿಯಲ್ಲಿ ಹತ್ತಿ ಎಳನೀರನ್ನು ಕೀಳುವ ಸಾಹಸಕ್ಕೆ ಹತ್ತಿ ಗಿರಿ ಸಾವನ್ನು ಅಪ್ಪಿದ. ಬದುಕಿಯು ಸತ್ತಂತೆಯೆ ಆಗಿದ್ದ ಅವನ ಪಾಲಿಗೆ ಚೌಡಿ ಸ್ವಲ್ಪ ಮುದವನ್ನು ಕೊಟ್ಟಿರಬಹುದು. ಆದರೆಗವಡರ ಮನೆಯ ಜೊತೆಯಲ್ಲಿ ರಾಜಿ ಮಾಡಿಕೊಳ್ಳುವ ಮೊದ ಮೊದಲು ಜಗ್ಗದ ಗಿರೀಗೌಡರ ಮುಖವನ್ನು ಕಾಣುತ್ತಿದ್ದಂತೆಯೆ ಹೇಗೆ ಅವರಿಗೆ ತನ್ನನ್ನು ಅರ್ಪಿಸಿಕೊಂಡ ಎನ್ನುವುದರಲ್ಲಿ ಲೇಖಕರು ಅದ್ಭುತ ಕಲೆಗಾರಿಯನ್ನು ಸಾಧಿಸಿದ್ದಾರೆ. ಈ ಕಥೆ ಒಂದು ಸಣ್ಣ ಚಿತ್ರಶಾಲೆಯಂತೆ ತೆರೆದುಕೊಂಡು ನಮ್ಮನ್ನು ಸಂಪೂರ್ಣವಾಗಿ ವಶಪಡಿಸಿಕೊಳ್ಳುತ್ತದೆ. ಮುಂದಿನ ಕಥಾಭಾಗದಲ್ಲಿ ಕೃತಿಯ ಹೆಸರನ್ನೇ ಸೂಚಿಸುವ ಕಥೆಯು ಮೈನವಿರೇಳಸುವ ಘಟನಾವಳಗಳನ್ನು ಸೃಷ್ಟಿಸುತ್ತದೆ. ಆ ಹೆಸರೇ ಸಾಕ್ಷಿ. ಈ ಕತೆಯ ನಾಯಕ ವಿಶ್ವ. ಎರಡು ದಿನ ಇದ್ದು ಹೋಗಲೆಂದು ಅನಿರೀಕ್ಷಿತವಾಗಿ ಕಾರ್ಯಕ್ರಮ ಇರಿಸಿಕೊಂಡು ವಿಶ್ವ ಊರ ಬಸ್ಸು ಹತ್ತಿದ. ಇಳದು ಹಟ್ಟಿ ಸೇರಿದ ಮೇಲೆ ಮತ್ತೆ ಕೀಳದಂತೆ ಬೇರು ಬಿಟ್ಟ. ಗೌ ಎನ್ನುವ ಆವರಣದಲ್ಲಿ ಸತ್ತು ಹೋಗುತ್ತೇನೆ ಎನಿಸುದುದಕ್ಕೆ ಕಾರಣ ಹುಡುಕಬಾರದು. ಹಾಗೇ ಒಂದು ವೇಳೆ ಹುಡುಕುತ್ತಾ ಹೋದರೆ ಮನದಾಳದಲ್ಲಿ ಏನೇನೊ ಸಿಕ್ಕಬಹುದೆನೆಸಿ ಹತ್ತು ಕಂಬದ ಅಪ್ಪ ಕಟ್ಟಿದ ತೊಟ್ಟಿಯ ಹಟ್ಟಿಯ ಕಂಬಗಳ ಸುತ್ತ ಬುಗುರಿಬಿಟ್ಟ. ತೆಪ್ಪಗೆ ಕೂರುವುದು ಅಸ್ತಿತ್ವಕ್ಕೆ ಧಕ್ಕೆ ತರುತ್ತದೆ. ಹೊರಡಬೇಕು ಎಂದು ಸೊಲ್ಲು ಎತ್ತಿದರೆ ಅವ್ವ ಅಡ್ಡಗಟ್ಟುತ್ತಾಳೆ. ಸುಮ್ಮನೆ ಅತ್ತು ಕಣ್ಣು ಊದಿಸಿಕೊಂಡರೆ ಇದ್ದವರಿಗೆಲ್ಲಾ ಬೇಸರವಾಗುತ್ತದೆ. ಕಿಸಾ ಗೌತಮಿ ಕಥೆ ಹೇಳ ಹೋಗುತ್ತಿದ್ದುದು ವಿಶ್ವನಿಗೆ ಒಗ್ಗದೆ ನಗಬೇಕೆನಿಸುತ್ತದೆ. ಈ ಸಮಯಕ್ಕೆ ಬರುವಂತಾದರೆ ಅಳುವು ಒಂದೇ.

ಆ ಕ್ಷಣಕ್ಕೆ ಬಳಕೆಯಾಗಿ ಮತ್ತೇ ಸವಕಲು ನಾಣ್ಯದ ವ್ಯಕ್ತಿತ್ವದಂತೆ ಭಾಸವಾಗುತ್ತದೆ. ಬಿಡಿಸಿಕೊಳ್ಳಬೇಕು ಎಂದುಕೊಂಡಾಗೆಲ್ಲಾ ಬೇರುಗಳು ಬೆಳೆದುಕೊಳ್ಳುತ್ತಿವೆ. ಅಸ್ತಿತ್ವದ ಸುತ್ತ ಮುತ್ತ ಸಂತಾಪ ಸೂಚಿಸಲೆಂದು ಬರುವ ಸಂಖ್ಯೆ ಕಡಿಮೆಯಾಗುವಂತೆ ತೋಚುತ್ತಿಲ್ಲ. ಆಗಂತುಕರು ಸುಮ್ಮನೆ ಬರುವ ಜಯಮಾನದವರಲ್ಲ. ಬರುತ್ತಾ ಏನಾದರೊಂದು ತಂದು ತುಂಬಿ ಇಲ್ಲದ ತರಲೆ ಹಬ್ಬುತ್ತಾರೆ. ವಿಶ್ವ ಜಗುಲಿಗೆ ಬಂದವನೇ ನೋಡಿದ. ಗಾಯದ ಸುತ್ತ ಕೂತ ನೊಣಗಳು ಕೀಟಲೆ ಮಾಡುತಿವೆ, ಹೀರುತ್ತಿವೆ, ಉಗಿಯುತ್ತಿವೆ, ಕೊರೆಯುತ್ತಿವೆ ಹೊಡಿಸಬೇಕು. ಅದೇ ಕಷ್ಟದ ಕೆಲಸ ಎಲ್ಲರು ಬಂಧುಗಳೆ, ನಮ್ಮವರೆ, ಆಪ್ತರೆ ಸತ್ತಾಗಲಾದರು ಒಂದಾಗಲೊಲ್ಲದವರು ಮನುಷ್ಯರೇ? ಎಂಬ ತತ್ವದ ಜಿಗುಣೆಗಳು. ಸಾರ್ ಜಿಗುಣೆಗಳು. ಅಪ್ಪ ಗೋಡೆಗೆ ಹೊರಗಿ ಕುತಿರುವುದು ಚಟ್ಟಕ್ಕೆ ಬಿಗಿದ ಹೆಣದಂತೆ. ಇವನು ಅಣ್ಣನನ್ನು ಹೋಲುತ್ತಿದ್ದುದರಿಂದ ಇವನೇ ಸತ್ತಂತೆ ಕಂಡ. ಆಗ ಅವ್ವನ ಮಾತುಗಳಗೆ ಬೇಡಿಕೆಗಳಗೆ ಒಂದರ್ಥ ಬಂದು ಉರಿಯುವ ಕೊಳ್ಳಿಗಳಾಗುತ್ತವೆ.

"ವಿಶ್ವ ಕಷ್ಟ ಕಾಲಕ್ಕೆ ಮಕ್ಕಳು ಆಗುತ್ತವೆ ಎಂದು ಸಾಕಿ ಸಲಹಿ ದೊಡ್ಡವರನ್ನಾಗಿ ಮಾಡಿ ಓದಿಸಿದಕ್ಕೆ ಏನಾಯಿತು? ನಿನ್ನ ಅಣ್ಣ ಇಷ್ಟೆಲ್ಲಾ ಬುದ್ಧಿ ತಿಳದು ಏನು ಮಾಡಿದ, ಸಾಕಪ್ಪ ನೀನು

ಓದಿ ಬೂದಿ ಮುಕ್ಕೋದು, ನಮ್ಮ ಕಣ್ಣ ಮುಂದೆ ಓಡಾಡಿಕೊಂಡಿರು, ನಮಗೂ ನೆಮ್ಮದಿ ಅಂದದ್ದು ನೆನಪಿಗೆ ಬಂದಿತ್ತು.

ಈ ರೀತಿಯಾಗಿ ವಿಶ್ವ ಸಾಕ್ಷಿ ಕಥಾಸಂಕಲನದಲ್ಲಿ ತನ್ನ ಪಾತ್ರಕ್ಕೆ ಮೂಕ ಸಾಕ್ಷಿಯಾಗಿ ಸನ್ನಿವೇಶಗಳು ನಿರ್ಮಾಣವಾಗುವಂತೆ ನೋಡಿಕೊಂಡಿದ್ದಾನೆ.

ಸಾಕ್ಷಿ ಕಥೆಯಲ್ಲಿ ವಿಶ್ವ ವಿದ್ಯಾವಂತ ತರುಣನಾಗಿ ತನ್ನ ಮನೆಯ ವಿಷಾಧದ ಘಟನೆಗಳನ್ನು ಮೂಕ ಸಾಕ್ಷಿಯಾಗಿ ನೋಡಿ ಮನೋಕ್ಷೋಭೆಗೆ ಸನ್ನಿವೇಶಗಳ ಚಿತ್ರಣವಿದೆ. ಈ ಕಥೆಯ ಮೂಲ ಸಮಸ್ಯೆ ಮನೆಯ ಹಿರಿ ಮಗನ ಆತ್ಮಹತ್ಯೆ. ಅದಕ್ಕೆ ಮೂಲ ಪ್ರೇರಣೆ ಎಲ್ಲಿಂದ ಬಂದಿತು ಎಂಬುದನ್ನು ಬೆದಕಿ ತೆಗೆಯುವ ವಿಶೇಷ ದೃಷ್ಟಿಯ ನಾಯಕ ಕೊನೆಗೂ ಅದರಲ್ಲಿ ಯಶಸ್ವಿಯಾಗುತ್ತಾನೆ.

ವಿಶ್ವನನ್ನು ಕೇಂದ್ರವಾಗಿಟ್ಟುಕೊಂಡು ದುರ್ಘನೆಯೊಂದು ಸಂಭವಿಸಿದಾಗ ಮೂಡಿ ಬರುವ ಸನ್ನಿವೇಶಗಳನ್ನು ಬೆಳೆಸುತ್ತ ಉಂಗುರದ ನೆಪದಲ್ಲಿ ರಹಸ್ಯ ಪತ್ರವೊಂದನ್ನು ದೊರಕಿಸುವುದರ ಮೂಲಕ ಮಧುವಿನ ಮರಣದ ಕಾರಣವನ್ನು ಕಥಾನಾಯಕ ಹೇಗೆ ಕಂಡುಕೊಂಡ ಎಂಬುದು ಕಥೆಯ ತಿರುಳು. ಗೌರಿ ಮತ್ತು ಮಧುವಿನ ಪ್ರೇಮದ ಕುರುಹು ಆದ ಉಂಗುರವೇ ಇಲ್ಲಿ ಒಂದು ಸಾಕ್ಷಿಯಾದಂತೆ. ಕಾಗದ ದೊರಕಲು ಕಾರಣವಾಗುತ್ತದೆ. ವಿದ್ಯಾವಂತನಾದ ಮಗನಿಗೆ ಅವಿದ್ಯಾವಂತ ತಂದೆ-ತಾಯಿಗಳು, ಅಧಿಕಾರದ ಅಮಲಿನ ಅತ್ತೆ-ಮಾವಂದಿರು, ಸುಸಂಸ್ಕೃತ ಹೆಣ್ಣು, ಅನಿರೀಕ್ಷಿತ ಮರಣದ ವಾರ್ತೆ ತಂದೆ-ತಾಯಿಯರಿಗೆ ಉಂಟು ಮಾಡುವ ಆಘಾತ, ಊರಿನವರು ಜಿಗಣೆಯಂತೆ ಮುತ್ತಿ ಉರಿಯುವ ಬೆಂಕಿಗೆ ತುಪ್ಪ ಎರೆಯುವ ರೀತಿ - ಇವು ವಾಸ್ತವ ಚಿತ್ರಗಳಾಗಿ ಮೂಡಿ ಬಂದಂತೆಯೆ ಕಥಾ ಸೂತ್ರವು ಕಡಿದು ಹೋಗದಂತೆ ಒಂದು ಮರಣದ ಸುತ್ತ ಹಬ್ಬಿದ ಹೊಗೆಯ ಅಂದವನ್ನು ನೋಡುವುದೇ ಕಥೆಗಾರರ ಉದ್ದೇಶವಾಗಿದ್ದು ಅದು ಯಶಸ್ವಿಯಾಗಿದೆ.

ಮತ್ತೊಂದು ಕಥೆಯು ಈ ಸಾಕ್ಷಿ ಕಥಾ ಸಂಕಲನಾದಲ್ಲಿ ಕಂಡು ಬರುತ್ತದೆ. ಅದು 'ಸ್ಥಿತಿ' ಹಳ್ಳಿಯ ಸಂಸಾರದಲ್ಲಿ ವಾರಗಿತ್ತಿಯರ ವಿರಸದ ಸುತ್ತ ಬೆಳೆದುಕೊಂಡ ಕಥೆ ಇದು. ಕತೆಯಲ್ಲಿ ಕಥೆ ಎಂಬಂತೆ ಹಳ್ಳಿಯ ಬಲಿಷ್ಠ ವಕ್ರದೃಷ್ಟಿಗೆ ಬಲಿಯಾದ 'ಚಂತ್ರಿ' ಬಡಪಾಯಿಯಂತಹ ಹೆಣ್ಣಿನ ಕಥೆಯಲ್ಲಿ ಬೆಸೆದುಕೊಂಡಿದೆ. ಹೊನ್ನಕ್ಕ, ದೇವಿ ವಾರಗಿತ್ತಿಯರಾಗಿ ಪರಸ್ಪರ ಅರ್ಥ ಮಾಡಿಕೊಳ್ಳದೆ ಕಣಕ್ಕಿಳಿಯುವ ಸನ್ನಿವೇಶ ಚಿಂತ್ರಿಯ ಆರ್ತನಾದವನ್ನು ಕೇಳಿ ಬಂದು ಅವಳನ್ನು ಥಳಿಸುವ ಸಂದರ್ಭ ಚಿಂತ್ರಿ ಬೀದಿಯಲ್ಲಿ ಕುಳಿತು ತನ್ನ ಅಳಲನ್ನು ತೋಡಿಕೊಳ್ಳುವ ಬಗೆ ಸಿದ್ಧರಾಮನ ಅಸಹಾಯಕತೆ ಬದುಕಿನಲ್ಲಿ ಹೋರಾಡಿ ಹೋರಾಡಿ ಮನೆಯನ್ನು ಕಟ್ಟಿದ ಹೊನ್ನಕ್ಕನ ಕೊನೆಗಾಲದ ಅವಸ್ಥೆ ಮುಂತಾದವುಗಳನ್ನು ಲೇಖಕರು ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ.

ಸಾಕ್ಷಿಯ ಅಂತಿಮ ಕಥೆಯಾದ ಆಕ್ರಮಣ ಹೆಸರೇ ಸೂಚಿಸುವಂತೆ ಬಡತನದ ಭೀಕರ ಸಮಸ್ಯೆಯ ಸುತ್ತ ಎಣೆದುಕೊಂಡಿದೆ. ಈ ಕಥೆ ಸಂಕಲನದ ಒಂದು ಉತ್ತಮ ಕಥೆಯಾಗಿ ಸಂಸಾರದ ಹೊರೆಯನ್ನು ಹೊರಲಾರದೆ ಹೊತ್ತ ಜೋಗಿ ಹೇಗಾದರು ಸಂಪಾದಿಸಿ ತರುವಂತೆ ಗಂಡನನ್ನು ಚಟಕು ಮುಳ್ಳು ಆಡಿಸುವ ಹೆಂಡತಿ ನಡುವೆ ಹೆಗಲಿಗೆ ಜೋತು ಬಿದ್ದ ಮಕ್ಕಳು ಈ ಮೂರು ಬಿಂದುಗಳ ನಡುವೆ ಈ ಕಥೆ ತ್ರಿಕೋನವನ್ನು ಎಳೆಯಬಹುದು. ಜೋಗಿಯೆ ಇಲ್ಲಿ ಪ್ರಧಾನ ಪಾತ್ರವಾದರು ಕೊನೆ ಕೊನೆಯಲ್ಲಿ ಅವಳ ಮಗಳು ಮುಗ್ಧೆ 'ನಾಗಿ' ಸಹೃದಯರ ಹೃದಯದ ತುಂಬಾ ತುಂಬಿಕೊಳ್ಳುತ್ತಾಳೆ. ಅಲ್ಲದೆ ಒಲ್ಲದ ಗಂಡನಿಗೆ ಅವಳನ್ನು ಗಂಟು ಹಾಕಿ ಭಾರವನ್ನು ಇಳಸಿಕೊಳ್ಳಲು ಪ್ರಯತ್ನಸಿದ ತಂದೆ-ತಾಯಿ, ಅಕ್ಕ-ಭಾವ, ಇತರರ ವರ್ತನೆಗೆ ಬೇಸತ್ತು ನಾಗಿ ನೀರು ಪಾಲಾಗುತ್ತಾಳೆ. ಇದು ಕಥೆಯ ಪರಿಸಮಾಪ್ತಿ. ಈ ನಡುವೆ ಸಂತೆಯ ಅನುಭವ, ಪಂಚಾಯಿತಿಯ ಸ್ವಾರಸ್ಯಗಳು ಕಥೆಯ ಚೌಕಟ್ಟಿನಲ್ಲಿ ಎದ್ದು ತೋರುವ ಘಟನೆಗಳಾಗಿವೆ. ಈ ಕಥೆಯ ಸ್ವಾರಸ್ಯವೆಲ್ಲಾ ತುಂಬಿರುವುದು ಅಲ್ಲಿನ ಸಂಭಾಷಣೆಯ ವೈಖರಿಯಿಂದ. ಮಂಡ್ಯದ ಭಾಷೆಯ ಸೊಗಡನ್ನು ಸವಿಯಲು ಸಹೃದಯ ಓದುಗ ಮಿತ್ರರಿಗೆ ಈ ಕಥೆಯು ಮೂಲ ಸಾಕ್ಷಿಯಾಗಿದೆ.

ಈ ಮೇಲೆ ಚರ್ಚಿಸಲಾದ ಎಲ್ಲಾ ಕತೆಗಳು ರಮೇಶ ಹುಲ್ಲುಕೆರೆಯವರ ಬರವಣಿಗೆಯ ಶಕ್ತಿಯನ್ನು ಒರಗೆ ಹಚ್ಚಿ ನೋಡಬಹುದಾದ ಹೊಳ್ಳೆಯ ರಚನೆಗಳಾಗಿವೆ. ಹಳ್ಳಿಯ ಜೀವನದ ಎಳೆ ಎಳೆಯನ್ನು ಬಿಡಿಸಿ ಕತೆಗಾರರು ಸುಂದರ ಕಲಾಕೃತಿಗಳನ್ನು ರಚಿಸಿದ್ದಾರೆ. ಅವರ ಆಡು ಮಾತಿನ ಪ್ರಯೋಗ, ಪಾತ್ರಗಳ ಬೆಳವಣಿಗೆ, ಸಂಭಾಷಣೆಯ ಸೊಗಸು, ಗಾದೆಗಳ ಹೇರಳ ಬಳಕೆ, ಸಹಜವಾದ ಭಾಷೆಯ ಸುಗಡು ನಿರರ್ಗಳವಾಗಿ ಸಾಗುವ ಶೈಲಿ, ಅಲ್ಲಲ್ಲಿ ಮನಸ್ಸನ್ನು ಸೆಳೆಯುವ ವರ್ಣನೆಗಳು ಈ ಕತೆಗಳ ತೂಕವನ್ನು ಹೆಚ್ಚಿಸಿವೆ. ಪಾತ್ರಗಳ ಅಂತರಂಗವನ್ನು ಹೊಕ್ಕು ಸೂಕ್ಷ್ಮ ಭಾವಗಳನ್ನು ಮಿಡಿಯುದರಲ್ಲಿ ಲೇಖಕರು ತುಂಬಾ ಯಶಸ್ವಿಯಾಗಿದ್ದಾರೆ. ಮಂಡ್ಯ ಹಳ್ಳಿಗಳ ದಟ್ಟ ಹಸಿರಿನ ನಡುವೆಯೆ ಹುದುಗಿರುವ ಬಡತನದ ನಿಟ್ಟುಸಿರು, ಜೀವನದ ಹೋರಾಟ, ಒಳ ಜಗಳ ಮುಂತಾದವು ಈ ಕಥೆಗಳಲ್ಲಿ ಅರಡಿಕೊಂಡು ಮನವನ್ನು ಮಿಡಿಯುತ್ತಿವೆ. ಕಥೆಗಳನ್ನು ರೂಪಿಸುವಲ್ಲಿ ಕತೆಗಾರರು ಅನುಸರಿಸುವ ನವ್ಯ ಮಾರ್ಗವು ಗಮನಾರ್ಹವಾದುದು. ಒಂದೊಂದು ಪಾತ್ರದ ಅಂತರಂಗವನ್ನು ವಿಶ್ಲೇಷಿಸಿ ಭಾವಗಳ ಪರಂಪರೆಯನ್ನು ಕಥೆಗಳ ಮೈಗೆ ತುಂಬಿ ಹೊಸ ಚೈತನ್ಯವನ್ನು ಮೂಡಿಸಿದ್ದಾರೆ. ಕಥೆಯ ಸಂವಿಧಾನ ಕೆಡದಂತೆ ಹಳ್ಳಿಯ ಬದುಕಿನ ಚಿತ್ರವನ್ನು ವಿವರವಾಗಿಯೆ ಬಿಡಿಸಿದ್ದಾರೆ. ಇದರ ಪರಿಣಾಮ ದೃಷ್ಟಿಯಿಂದ ಇಲ್ಲಿ ಕಂಡು ಬರುವ ಜೀವನ ಸ್ಪಂಧನ ಕಥೆಗಳಿಗೆ ಕಲೆ ಚೌಕಟ್ಟಕ್ಕನ್ನು ತೊಡಿಸಿ ಉತ್ತಮ ಕೃತಿಯನ್ನಾಗಿಸಿದೆ. ರಮೇಶ ಹುಲ್ಲುಕೆರೆಯವರ ಮತ್ತಷ್ಟು ಕಥೆಗಳು ಇತಿಹಾಸದಲ್ಲಿ ತಮ್ಮ ಹೆಸರನ್ನು ಶಾಶ್ವತವಾಗಿ ದಾಖಲು ಮಾಡಿಕೊಳ್ಳುವಂತೆ ಹರಿಕೆ ಮಾಡಿಕೊಳ್ಳೋಣ.

# ಅಧ್ಯಾಯ ೫

## ಅಡಿ ಟಿಪ್ಪಣಿ:

ರಮೇಶ ಹುಲ್ಲುಕೆರೆಯವರ ಸಣ್ಣ ಕತೆಗಳು ವಿಮರ್ಶಾ ಲೇಖನ ಜಿ.ಸಂ.ಪರಮಶಿವಯ್ಯ

ಪುಟ ಸಂಖ್ಯೆ ೧-೭

## ಅಧ್ಯಾಯ – ೬

## ರಮೇಶ ಹುಲ್ಲುಕೆರೆಯವರು ಕೆಲಸ ಮಾಡಿದ ಇತರ ಕ್ಷೇತ್ರಗಳ ಸಂಕ್ಷಿಪ್ತ ಪರಿಚಯ

ರಮೇಶ ಹುಲ್ಲುಕೆರೆಯವರು ಸಾಹಿತಿ ಆಗಿದ್ದರಲ್ಲದೆ ಹೆಚ್ಚಾಗಿ ಸಮಾಜದ ಹೇಳಿಗೆಗೆ ಶ್ರಮಿಸಿದ್ದೆ ಹೆಚ್ಚು ಮತ್ತು ಸಾಹಿತ್ಯದ ರಚನೆಗಿಂತ ಸಮಾಜದ ಆಗು ಹೋಗುಗಳನ್ನು ಕೇವಲ ಬಾಯಿಯಿಂದ ತಿಳಿ ಹೇಳಲು ಸಾಧ್ಯವಾಗದೆ ಜನರಿಗೆ ಸಂದೇಶವನ್ನು ಸರಿಯಾದ ನಿಯಮಾನುಸಾರ ತಿಳಿಸಬೇಕೆಂಬ ಮಹದಾಸೆ ಇತ್ತು. ಇದರಿಂದಾಗಿ "ವೀಕ್ಷಕ ಎಂಬ ಪತ್ರಿಕೆಯನ್ನು ಆರಂಭಿಸಿ, ಅದರ ಸಂಪಾದಕರಾಗಿ ಪತ್ರಿಕಾ ರಂಗವನ್ನು ಪ್ರವೇಶ ಮಾಡಿದರು. ಅದರ ಜೊತೆಗೆ ಸಂಘಟನೆಯನ್ನು ಕೂಡ ಕೈಗೆತ್ತಿಕೊಂಡರು.

ಮೂಲತಃ ವಿಜ್ಞಾನ ವಿದ್ಯಾರ್ಥಿಯಾಗಿದ್ದ ಇವರು ಸಮಾಜದಲ್ಲಿನ ರಾಜಕೀಯ, ಆರ್ಥಿಕತೆ, ಬಡತನ ಎಲ್ಲಾ ವಿಚಾರಗಳನ್ನು ಗಮನಿಸಿದ ಹುಲ್ಲುಕೆರೆಯವರು ಕೆಲವೊಂದು ಹೇಳಿಕೆಗಳನ್ನು ಕೊಡುವುದರ ಮೂಲಕ ಸಮಾಜದಲ್ಲಿ ಮುಖ್ಯವಾಹಿನಿಗೆ ಬರುವ ಕಾರ್ಯಕ್ಕೆ ಮುಂದಾದರು. ಮೊದಲಿಗೆ ವೀಕ್ಷಕ ವಾರ ಪತ್ರಿಕೆಯ ಮೂಲಕ ಅನೇಕ ಹೊಸ ಬರಹಗಾರರನ್ನು ಗುರುತಿಸುವ ಕೆಲಸ ಮಾಡಿದ್ದಾರೆ. ಮಂಡ್ಯ ಜಿಲ್ಲೆಯ ಜನತೆ ರಾಜಕೀಯ, ಆರ್ಥಿಕ ಪರಿಸ್ಥಿತಿ ಎಲ್ಲವನ್ನು ಕೂಲಂಕುಶವಾಗಿ ಪರಿಶೀಲಿಸುವ ಕಾರ್ಯವನ್ನು ಕೈಗೊಂಡರು.

ಈ ವೀಕ್ಷಕ ವಾರ ಪತ್ರಿಕೆಯ ಸ್ಪಷ್ಟ ಉದ್ದೇಶ ಹೊಸ ವಿಚಾರ ಸರಣಿಯ ವೇದಿಕೆಯಾಗಿ ತರುಣ ಜನಾಂಗದ ಅಭಿವ್ಯಕ್ತಿ ಮಾಧ್ಯಮವಾಗಿ ಜನ ಸಾಮಾನ್ಯರ ಮುಖವಾಣಿಯಾಗಿ ಪ್ರಕಟ ಮಾಡಿದರು.

ಕರ್ನಾಟಕದ ಸಂಸ್ಕೃತಿ, ಸಾಹಿತ್ಯ, ರಾಜಕೀಯದ ಆಗು ಹೋಗುಗಳನ್ನು ನಿಷ್ಪಕ್ಷಪಾತವಾಗಿ ಸಮೀಕ್ಷಿಸಿ ಉನ್ನತವಾದುದನ್ನು ಪ್ರೋತ್ಸಾಹಿಸುವ ಕಾರ್ಯವನ್ನು ಕೈಗೊಂಡಿತು. ಬಡ ಜನರಿಗೆ, ಬಡ ರೈತರಿಗೆ ಆಗುತ್ತಿರುವ ಅನ್ಯಾಯಗಳನ್ನು ಗುರುತಿಸಿಅವರನ್ನು ಕಲೆ ಹಾಕಿ ಕಾನೂನು ಹೋರಾಟವನ್ನು ಪ್ರಾರಂಭಿಸಿತು. ಒಕ್ಕಲಿಗರ ಪರವಾದ ಧ್ವನಿ ಎತ್ತಿ ಅವರಿಗೆ ಸರಿಯಾದ ಸ್ಥಾನ-ಮಾನ ನೀಡುವಂತೆ ಮಾಡಿದರು. ಹಲವಾರು ಹೆಸರಾಂತ ವ್ಯಕ್ತಿಗಳನ್ನು ಸಮಾಜಕ್ಕೆ ಗೌರವ ರೀತಿಯಲ್ಲಿ ಪರಿಚಯಿಸಿದ ಕೀರ್ತಿ ವೀಕ್ಷಕ ವಾರ ಪತ್ರಿಕೆಗೆ ಸಲ್ಲುತ್ತದೆ.

ಮಂಡ್ಯ ಜಿಲ್ಲೆಯ ಕಣ್ಮಣಿಗಳು ಎಂದರೆ ಅತಿಶಯೋಕ್ತಿಯಲ್ಲ. ಅಂತಹವರಲ್ಲಿ ಶ್ರೀ ಎಸ್.ಎಂ.ಕೃಷ್ಣರವರು, ಶ್ರೀ ಚಿಕ್ಕಲಿಂಗಯ್ಯ, ಶ್ರೀ ಕೆ.ವಿ.ಶಂಕರೇಗವಡರು, ಶ್ರೀಮತಿ ದಮಯಂತಿ ಬೋರೇಗೌಡ, ಶ್ರೀ ಎಂ.ಲಿಂಗಯ್ಯ, ಶ್ರೀ ಕೆ.ಟಿ.ವೀರಪ್ಪ, ಶ್ರೀ ಜಿ.ನಾರಾಯಣ, ಶ್ರೀ ಹೆಚ್.ಎಲ್.ನಾಗೇಗೌಡರು, ಡಾ॥ ಎಸ್.ರಾಮೇಗೌಡರು, ಶ್ರೀ ನರಸಿಂಹೇಗೌಡರು, ಶ್ರೀ ವಿ.ಸಿ.ಬೋರೇಗೌಡರು, ಶ್ರೀ ಸಿಂಗಾರಿಗೌಡರು, ಶ್ರೀ ಕೆ.ಎಂ.ಶಂಕರಪ್ಪ, ಶ್ರೀ ಬೆಸಗರಹಳ್ಳಿ ರಾಮಣ್ಣ

ಇವರೆಲ್ಲಾ ವ್ಯಕ್ತಿಗಳನ್ನು ತಮ್ಮ ಲೇಖನದ ನೆನಪಿನ ಆಳದಲ್ಲಿ ಹಿರಿಯ ಕಿರಿಯ ವ್ಯಕ್ತಿಗಳ ಹೆಸರನ್ನು ಸೇರಿಸಲಾಗಿದೆ. ಇವರಲ್ಲದೆ ಇನ್ನೂ ಅನೇಕ ವ್ಯಕ್ತಿಗಳು ನಮ್ಮ ಗಮನಕ್ಕೆ ಬರದೆ ಉಳಿದು ಹೋಗಿರಬಹುದು ಎಂಬ ಮಾಹಿತಿಯನ್ನು ನೋಡುವುದರ ಮೂಲಕ ಪತ್ರಿಕಾ ರಂಗಕ್ಕೆ ಮೆರಗು ನೀಡಿದರು.

ಮೂಢನಂಬಿಕೆಗಳ ವಿರುದ್ಧವು ಧ್ವನಿ ಎತ್ತಿ ಅವುಗಳಿಗೆ ಕಡಿವಾಣ ಹಾಕುವ ಉದ್ದೇಶದಿಂದ ಪತ್ರಿಕೆಯಲ್ಲಿ ಅನೇಕ ಲೇಖನಗಳನ್ನು ಕ್ರೂಢಿಕರಿಸಿದರು. ಅಂತಹವುಗಳಲ್ಲಿ ಒಂದು 'ಬಸವಿ' ಅಥವಾ 'ಜೋಗಮ್ಮ' ಎಂಬ ವಿಚಾರವನ್ನು ಪತ್ರಿಕೆಯಲ್ಲಿ ಪ್ರಕಟವಾಗುವಂತೆ ಮಾಡಿದರು.

ಬಸವಿ ಪದ್ಧತಿ ಎಂಬ ಲೇಖನವನ್ನು ಓದಿದ ಕ್ಯಾತನಹಳ್ಳಿ ರಾಮಣ್ಣನವರು ತಮಗೆ ಅನಿಸಿದ ವಾಕ್ಯಗಳನ್ನು ಬರೆದರು. ಅದು ಹೀಗಿದೆ – ಹುಲ್ಲುಕೆರೆಯವರು ಕರ್ನಾಟಕದ ಎಲ್ಲಾ ಭಾಗಗಳಿಂದಲು ಉದಾಹರಣೆ ನೀಡಿರುವುದರಿಂದ ಲೇಖನ ತನ್ನಷ್ಟಕ್ಕೆ ತಾನು ಪೂರ್ಣವೆನಿಸಿ ಉತ್ತರ ಕರ್ನಾಟಕ ಭಾಗದಲ್ಲಿ ಅಲ್ಲಲ್ಲಿ ಸಾಮಾನ್ಯರ ಹಿಂದುಳಿದ ಜನರೊಂದಿಗೆ ನಾನು ಕೆಲವಾರು ದಿನಗಳನ್ನು ನಿಕಟವಾಗಿ ಕಳೆದಿರುವುದರಿಂದ ಆ ಸಂದರ್ಭದಲ್ಲಿ ನನಗನಿಸಿದ್ದನ್ನು ಹೇಳುವುದು ಉಚಿತವೆನಿಸುತ್ತದೆ. ಹುಲ್ಲುಕೆರೆಯವರು ಹೇಳಿರುವ ಒಂದು ಮಾತು ಅತ್ಯಂತ ಗಮನಾರ್ಹವಾದುದು. ಸಮಾಜದಲ್ಲಿ ಯಾವ ಯಾವ ಹಿಂದುಳಿದ ವರ್ಗಗಳಿವೆಯೊ ಅವರಲ್ಲೆಲ್ಲಾ ಒಂದು ರೂಪದಲ್ಲಿ ಈ ಪದ್ಧತಿ ಬೆಳಕಿಗೆ ಬರದೆ ಒಳಗೆ ಮಂಡ್ಯದ ಜನ ಕೇಳರಿಯದ ಅದೆಷ್ಟೊ ಜಾತಿಗಳು ಉತ್ತರ ಕರ್ನಾಟಕದ ಕೆಲವು ಕಡೆ ಕಂಡು ಬರುತ್ತದೆ. ಅಂತಹುಗಳಲ್ಲಿ ಈ ಪದ್ಧತಿ ಇರುವುದರಲ್ಲದೆ. ವಿಷಯದ ಅಂತರಂಗವನ್ನು ಹೊಕ್ಕು ನೋಡಿದರೆ ತಾವೇ ಶ್ರೇಷ್ಠರೆಂದು ಮೆರೆಯುವ ಜಾತಿಗಳಲ್ಲು ಈ ಹೊಲಸನ್ನು ಕಾಣಬಹುದು. ಆರ್ಥಿಕ ಸಮಾನತೆ ಈ ಅಸಾಮನತೆಯನ್ನು ಇಚ್ಛಾನುಸಾರ ಯಶಸ್ವಿಯಾಗಿ ಬಳಸಿಕೊಳ್ಳುವ ಕಾಮುಕರು ಹೀಗೆ ಅನೇಕ ವಿಚಾರಕ್ಕಾಗಿ ಹೋರಾಟಕ್ಕಿಳಿದರು. ಪ್ರಸ್ತುತ ಸಂದರ್ಭದಲ್ಲಿ ಕುವೆಂಪುರವರ ವಿಚಾರಧಾರೆಯನ್ನು ನಾವು ನೋಡಬಹುದು. ಕುವೆಂಪುರವರ ಕಾವ್ಯದಲ್ಲಿ ವೇಚಾರಿಕ ಪ್ರಜ್ಞೆ ಎಂಬ ವಿಚಾರವಾಗಿ ಈ ಶತಮಾನದ ಕನ್ನಡ ಅಗ್ರಗಣ್ಯ ಕವಿ ರಸಋಷಿ ಕುವೆಂಪು. ಅವರ ಕಾವ್ಯವನ್ನು ಕುರಿತಂತೆ ಹಲವು ಬಗೆಯ ಅಭಿಪ್ರಾಯಗಳು ವ್ಯಕ್ತವಾಗಿವೆ. ಪಂಡಿತರ ಕಾವ್ಯ ಸಂಸ್ಕೃತಿ ಭೂಯಿಷ್ಟವಾದುದು ಎಂದು ಕೆಲವರು. ಅಂದರೆ ಕುವೆಂಪುರವರ ದರ್ಶನ ಕಾವ್ಯ ಯಾವುದೊ ಒಂದು ಸಿದ್ಧಿಯ ಅಂಕದಲ್ಲಿ ನಿರ್ಮಾಣಗೊಂಡ ಅವರ ಕಾವ್ಯ ಜನ ಸಾಮಾನ್ಯರನ್ನು ಮುಟ್ಟಲು ವಿಫಲಗೊಂಡಿದೆ ಎಂಬುದು ಕೆಲವರ ಅಭಿಪ್ರಾಯ. ಕುವೆಂಪು ಪ್ರಕೃತಿ ಕವಿಗಳು. ಪ್ರಕೃತಿಯ ಆರಾಧನೆಯಲ್ಲಿ ಅವರು ಜನ ಸಾಮಾನ್ಯರನ್ನು, ಅವರ ಕಷ್ಟ ಸುಖಗಳನ್ನು ಕುರಿತು ಚಿಂತಿಸಲಿಲ್ಲ ಎನ್ನುವವರು ಇದ್ದಾರೆ. ಈ ಎಲ್ಲಾ ಅಭಿಪ್ರಾಯಗಳನ್ನು ಒಪ್ಪಿಯೂ ಕುವೆಂಪುರವರು ಜನ ಸಾಮಾನ್ಯರ ಪ್ರತಿನಿಧಿಯಾಗಿ ಅವರ ಹಿತಚಿಂತಕರಾಗಿ ಕೆಲಸ ಮಾಡಿದ್ದಾರೆ. ಹೀಗೆ ಅವರು ಇನ್ನೂ ಅನೇಕ

ಲೇಖಕರರ ನುಡಿಗಳನ್ನು, ಬರವಣಿಗೆಯನ್ನು ವೀಕ್ಷಕ ವಾರ ಪತ್ರಿಕೆ ಪ್ರಕಟಿಸಿ ಜನ ಸಾಮನ್ಯರಿಗೆ ಅರಿವು ಮೂಡಿಸುವ ಕಾರ್ಯಕ್ಕೆ ಕೈ ಹಾಕಿದ್ದರು.

ಪತ್ರಿಕಾ ರಂಗವೇ ಅಲ್ಲದೇ ಇನ್ನೂ ಅನೇಕ ರೀತಿಯ ಹೋರಾಟಗಳನ್ನು ಮಡುವುದರ ಮೂಲಕ ಸಮಾಜದಲ್ಲಿ ಗಣ್ಯ ವ್ಯಕ್ತಿಯಾದರು. ಸಂಘಟನೆ ಮಾಡುವುದರ ಮೂಲಕ ಹೋರಾಟಕ್ಕೆ ಮೊದಲ ನಾಂದಿ ಆಡಿದರು. ಜಿಲ್ಲೆಯಲ್ಲಿ ಸಾಮಾಜಿಕ ಆರ್ಥಿಕ ಕ್ರಾಂತಿ ದಳದ ಸಂಸ್ಥಾಪಕರಾಗಿ ಕಾರ್ಯ ನಿರ್ವಹಿಸಿದರು. ಜಿಲ್ಲೆಯಲ್ಲಿ ಪ್ರಪ್ರಥಮ ಬಾರಿಗೆ ಬಡವರಿಗೆ ಆಶಾಕಿರಣವಾಗಿರುವ ಸರಳ ವಿವಾಹವನ್ನು ಜಾರಿಗೆ ತಂದ ಕೀರ್ತಿ ರಮೇಶ ಹುಲ್ಲುಕೆರೆಯವರದು. ಜಾತಿ ಪದ್ಧತಿಯನ್ನು ತಮ್ಮ ತೆಂಡೆ, ಸಾಕ್ಷಿ ಇತರ ಕೃತಿಗಳ ಮೂಲಕ ಬಂಡಿಸುವುದರ ಜೊತೆಗೆ ಸಮರಸವನ್ನೇ ಸಾರಿದರು. ಕೇವಲ ಕೃತಿಯಲ್ಲಿದೆ. ಪತ್ರಿಕೆಯಲ್ಲಿ ಅಲ್ಲದೇ ನಿಜವಾಗಿಯೂ ಹೋರಾಟವನ್ನೆ ಶುರು ಮಾಡಿದರು. ಮೂಢನಂಬಿಕೆಗಳು, ಪ್ರಾಣಿ ಬಲಿ, ಆಚಾರಗಳು ಇವೆಲ್ಲವನ್ನು ಖಂಡಿಸಿತ್ತು. ಸರಳ ಜೀವನದ ಕಡೆಗೆ ಜನರು ಮನಸೋಲುವ ಕಾರ್ಯವನ್ನು ಪತ್ರಿಕೆ, ಸಂಘಟನೆ, ಹೋರಾಟಗಳ ಮೂಲಕ ಕಾರ್ಯಗತ ಮಾಡಿದರು.

ಈಗಿನ ಕಾಲದಲ್ಲಿ ಕೇವಲ ಮನೆಯ ಯಜಮಾನ ತನ್ನ ಮನೆಯನ್ನು ನಿಭಾಹಿಸುವುದು ಕಷ್ಟ ಎಂದುಕೊಂಡು ಸಮಾಜದ ಯಾವುದೇ ಸಮಸ್ಯೆಗಳಗೆ ಸ್ಪಂಧಿಸದೇ ತನ್ನಷ್ಟಕ್ಕೆ ತಾನು ಇರುವ ಸಂದರ್ಭ, ಹುಲ್ಲುಕೆರೆಯವರು ಸ್ವಂತ ಹಣದಿಂದ ಸಂಸ್ಥೆ ಕಟ್ಟಿ ಹೋರಾಟಕ್ಕಿಳಿದಿರುವುದು ಮೆಚ್ಚತಕ್ಕ ವಿಚಾರವಾಗಿದೆ.

ಅಲ್ಲದೇ ಜಿಲ್ಲೆಯ ಅಭಿಮಾನವನ್ನು ಹೆಚ್ಚಿಸುವಲ್ಲಿ ಪತ್ರಿಕೆಯ ಮೂಲಕ, ಸಂಘಟನೆಯ ಮೂಲಕ ಜನ ಸಾಮಾನ್ಯರನ್ನು ಹೆಚ್ಚರಿಸಿದ್ದಾರೆ. ಕಾವೇರಿ ಹೋರಾಟ, ವರುಣ ನಾಲಾ ವಿರುದ್ಧದ ಹೋರಾಟ, ವೀಕ್ಷಕ ಪತ್ರಿಕೆಯ ಮೂಲಕ ಭೂಮಿಕೆ, ಗೋಕಾಕ್ ಚಳುವಳಿಗಳು ಸಕ್ರಿಯವಾಗಿ ಪಾಲ್ಗೊಂಡಿದ್ದಾರೆ. ಅಷ್ಟೇ ಅಲ್ಲದ ಇವರು ವಿಜ್ಞಾನದ ವಿದ್ಯಾರ್ಥಿ ಆಗಿದ್ದರು, ಕನ್ನಡದ ಸಾಹಿತ್ಯಕ್ಕೆ ಕುಂದು ತಂದಿಲ್ಲ.

ಮಂಡ್ಯ ಜಿಲ್ಲೆಯ ಭಾಷೆಗೆ ಅವಮಾನ ಮಾಡಿದಂತೆ ಕಂಡುಬರುವುದಿಲ್ಲ. ಕನ್ನಡ ಸಂಸ್ಕೃತಿ, ಸಾಹಿತ್ಯ ಹಾಗೂ ಭಾಷಾ ಜನಾಂದೋಲನದಲ್ಲಿ ಹೋರಾಟ ಮಾಡಿರುವುದು ಅತ್ಯಂತ ಶ್ಲಾಘನೀಯ ವಿಚಾರ. ಯಾವೊಬ್ಬ ವಿಜ್ಞಾನ ವಿದ್ಯಾರ್ಥಿಯು ಕನ್ನಡವನ್ನು ಮಾತನಾಡಲು ಹಿಂದು-ಮುಂದು ನೋಡುವ ಕನ್ನಡಿಗನಿಗೆ ನಾಚಿಕೆಯಾಗುವ ಹಾಗೆ ತಮ್ಮ ಅಮೂಲ್ಯ ಕೊಡುಗೆ ನೀಡಿದ್ದಾರೆ.

೧೯೭೩ ರಿಂದ ಕಾಂಗ್ರೆಸ್ ಕಾರ್ಯಕರ್ತರಾಗಿಯು ಕಾರ್ಯ ನಿರ್ವಹಿಸಿದರು. ಜೊತೆಗೆ ಮಂಡ್ಯ ನಗರದ ಕಾಂಗ್ರೆಸ್ ಸಮಿತಿಯ ಖಜಾಂಚಿಯಾಗಿ ನೇಮಕ ಮಾಡಿದ್ದಾರೆ. ಸಾರ್ವತ್ರಿಕ ಚುನಾವಣೆಗಳಲ್ಲಿ ಮುಖ್ಯಮಂತ್ರಿ ಎಸ್.ಎಂ.ಕೃಷ್ಣ ನೇತೃತ್ವದ ಕಾಂಗ್ರೆಸ್ ಪಕ್ಷದ ಗೆಲುವಿಗಾಗಿ

ಪ್ರಮುಖ ಪಾತ್ರ ವಹಿಸಿದರು. ಇಷ್ಟೇ ಅಲ್ಲದೇ ಅನೇಕ ಸಂಘ ಸಂಸ್ಥೆಗಳನ್ನು ಹುಟ್ಟು ಹಾಕಿ ಅಲ್ಲಿಯೂ ಯಶಸ್ವಿ ಪ್ರಧಾನ ಕಾರ್ಯದರ್ಶಿಗಳು ಅಖಿಲ ಭಾರತ ಮತ್ತು ಸಣ್ಣ ಮಧ್ಯಮ ಪತ್ರಿಕೆಗಳ ನವದೆಹಲಿ, ರಾಜ್ಯ ಘಟಕ, ಬೆಂಗಳೂರು. ಮಾಜಿ ಅಧ್ಯಕ್ಷರು, ಮಂಡ್ಯ ಜಿಲ್ಲೆ. ಕಾರ್ಯನಿರತ ಪತ್ರಕರ್ತರ ಸಂಘ, ಬೆಂಗಳೂರು. ಹೀಗೆ ಅನೇಕ ರೀತಿಯ ಸಂಘ ಸಂಸ್ಥೆಗಳಗೆ ಹಗಲಿರುಳು ದುಡಿದ ಕೀರ್ತಿ ರಮೇಶ ಅವರಿಗೆ ಸಲ್ಲುತ್ತದೆ.

ಪತ್ರಿಕಾ ರಂಗದಲ್ಲಿ ಅತೀ ಬೇಗ ಬೆಳೆದು ಹೆಮ್ಮರವಾಗಿ ಅಷ್ಟೇ ಬೇಗ ನಿರ್ಗಮನ ಹೊಂದಿದ ದುರಾದೃಷ್ಟ ಲೇಖಕರು ರಮೇಶ ಹುಲ್ಲುಕೆರೆಯವರು. ಹಲವಾರು ಪ್ರಶಸ್ತಿಗಳು ಇವರನ್ನು ಅರಸಿ ಬಂದಿರುವುದು ಇವರ ಶ್ರಮಕ್ಕೆ ಸಿಕ್ಕ ಪ್ರತಿಫಲ. ಹೀಗೆ ರಮೇಶ ಹುಲ್ಲುಕೆರೆಯವರು ತಮ್ಮ ಜೀವನವನ್ನು ಇದ್ದುದ್ದರಲ್ಲಿಯೆ ಸಾರ್ಥಕಪಡಿಸಿಕೊಂಡರು.

## ಅಧ್ಯಾಯ – ೭

# ರಮೇಶ ಹುಲ್ಲುಕೆರೆಯವರ ಅಪ್ರಕಟಿತ ಕಥಾ ಸಾಹಿತ್ಯ

ರಮೇಶ ಹುಲ್ಲುಕೆರೆಯವರು ಲೇಖಕರು, ಪತ್ರಿಕೋದ್ಯಮಿ ಎರಡೂ ಆಗಿದ್ದರಿಂದ ವೃತ್ತಿ ಮತ್ತು ಪ್ರವೃತ್ತಿಗಳಿಗೆ ಸವಾಲುಗಳಾಗಿವೆ. ಹುಟ್ಟಿದ ಪರಿಸರ ಕುರಿತು ನನ್ನಷ್ಟಕ್ಕೆ ನಾನೇ ಆಗಿ ಬರೆಯುವುದೇನೆಂದರೆ ನನಗೆ ಬಲಿಷ್ಟ ಹುಟ್ಟು ಮತ್ತು ಸಾವಿನ ನಡುವಿನ ಬದುಕನ್ನು ಇಲ್ಲಿನ ಕಥೆಗಳು ಅನಾವರಣಗೊಳಸಿದೆ. ಬದುಕು ನಿಜವಾಗಿಯೂ ಕಥೆಯೆ, ಆದರೆ ಕಥೆ ಬದುಕಾಗಲಾರದು. ನನ್ನನ್ನು ಕುರಿತು ನನ್ನ ಕಥೆಗಳು ಹೇಳಬೇಕು. ನನ್ನ ಕಥೆಗಳನ್ನು ಕುರಿತು ಸಹೃದಯ ಓದುಗರು, ವಿಮರ್ಶಕರು ಹೇಳಬೇಕು ಎಂಬ ನಿಲುವನ್ನು ವ್ಯಕ್ತಪಡಿಸುತ್ತಾರೆ.

ರಮೇಶ ಹುಲ್ಲುಕೆರೆಯವರ ಸಾಹಿತ್ಯದಲ್ಲಿ ಎಲ್ಲಾ ರೀತಿಯ ಸಾಹಿತ್ಯ ಪ್ರಕಾರಗಳಿಗೆ ಕೈ ಹಾಕಿ ಅಲ್ಪ ಸ್ವಲ್ಪ ಯಶಸ್ವಿಯಾಗಿದ್ದಾರೆ. ಮಂಥರೆ, ಲಂಕೇಶ ನಾಟಕಗಳನ್ನು ರಚಿಸಿದ್ದು ಇವು ಅಪ್ರಕಟಿತವಾಗಿವೆ. ಇಲ್ಲಿ ನಾವು ಕಲೆ ಹಾಕಿರುವ ಪ್ರಕಾರ ವಾಲ್ಮೀಕಿ ರಾಮಾಯಣದಲ್ಲಿ ಒಮ್ಮೆ ಕಾಣಿಸಿಕೊಂಡು ಮಾಯವಾದ ಮಂಥರೆಯ ಪಾತ್ರಕ್ಕೆ ಹೆಚ್ಚಿನ ಜೀವ ತುಂಬಿದವರು ಶ್ರೀ ಕುವೆಂಪು ಅವರು. ಕುವೆಂಪು ತಮ್ಮ "ಶ್ರೀ ರಾಮಾಯಣ ದರ್ಶನಂನಲ್ಲಿ ಪಾಪಿ ಗುದ್ದಾರ ಮಿಹಿದೌ ಸೃಷ್ಟಿಯ ಮಾಹದ್ ವ್ಯೂಹ ರಚನೆಯೊಳ್" ಎಂಬ ತತ್ವಕ್ಕೆ ಅನುಗುಣವಾಗಿ ಮಂಥರೆಯು ತನ್ನ ಮನೋದೌರ್ಬಲ್ಯದಿಂದ ಪಾರಾಗಿ ಕೊನೆಗೆ ಮೋಕ್ಷ ಪಡೆಯುವ ಚಿತ್ರಣವಿದೆ. ರಮೇಶ ಹುಲ್ಲುಕೆರೆಯವರ ಮಂಥರೆ ನಾಟಕದ ಮೇಲೆ 'ಶ್ರೀ ರಾಮಾಯಣ ದರ್ಶನಂ' ನಿಚ್ಛಳ ಪ್ರಭಾವವಿರುವುದು ಕಂಡುಬರುತ್ತದೆ. ಮಂಥರೆ ನಾಟಕದ ಮೊದಲಲ್ಲಿ ಹಾಗೂ ಕೊನೆಯಲ್ಲಿ ಮಾತ್ರ ಕಾಣಿಸಿಕೊಂಡರು ಒಟ್ಟು ನಾಟಕದ ಕ್ರಿಯೆಗೆ ಅವಳೇ ಹಿನ್ನೆಲೆಯಾಗಿದ್ದಾಳೆ. ನಾಟಕದ ಮೊದಲಲ್ಲಿ ಪಾಪಿಯು ದೈಹಿಕವಾಗಿ ಹಾಗೂ ಮಾನಸಿಕವಾಗಿ ಕ್ರೂರಿಯಂತೆ ಕಂಡುಬರುವ ಮಂಥರೆ ಉದ್ದಾತ ಮಾನವನು ಸರ್ವರಲ್ಲು ಪ್ರೀತಿ ಪ್ರೇಮವನ್ನು ಕಾಣುವ 'ಶ್ರೀರಾಮ ಸಾಕ್ಷತ್ಕಾರ'ದಿಂದ ಶುದ್ಧಾತ್ಮಳಾದ ಪುನೀತಳಾಗಿ ಶ್ರೀರಾಮ ನಾಮ ಜಪಿಸುತ್ತ ಮೃತ್ಯು ಸ್ವರೂಪಿಯಾಗಿ ನಿರ್ಗಮಿಸುತ್ತಾಳೆ.

ಮಂಥರೆ ರಾಮನನ್ನು ಕಾಡಿಗೆ ಕಳುಹಿಸುವಂತೆ ಕೇಳಕೊಳ್ಳಲು ಕೈಕೆಗೆ ಪ್ರೇರೇಪಿಸುವಲ್ಲಿ ವಾಸ್ತವ ಬದುಕಿಗೆ ಬಹಳ ಹತ್ತಿರದವಳಾಗಿ ನಮಗೆ ಕಂಡುಬರುತ್ತದೆ. ಒಟ್ಟಿನಲ್ಲಿ ಮೂಲ ರಾಮಾಯಣಕ್ಕೂ, ಮಂಥರೆ ನಾಟಕಕ್ಕೂ ಅಷ್ಟೇನು ವ್ಯತ್ಯಾಸಗಳಲ್ಲ. ಮೂಲ ಕಾವ್ಯ ರೂಪವನ್ನು ಇಲ್ಲಿ ದೃಶ್ಯ ಮಾದ್ಯಮಕ್ಕೆ ಅಳವಡಿಸಿರುವುದೇ ಇಲ್ಲಿನ ವಿಶೇಷ. ಈ ರೀತಿಯ ಅಪ್ರಕಟಿತ ಎಷ್ಟೋ ಇರುವುದನ್ನು ಗಮನಿಸಿ ನಾವು ಸಂಕ್ಷಿಪ್ತ ಮಾಹಿತಿಯನ್ನು ಚರ್ಚಿಸಿದಾಗ ರಮೇಶ ಹುಲ್ಲುಕೆರೆಯವರ ಸಾಹಿತ್ಯ ಕೃಷಿಯ ಅನುಭವ ನಮಗಾಗುತ್ತದೆ.

'ನೀರು' ಎನ್ನುವ ಒಂದು ಕಥಾ ಸಂಕಲನವನ್ನು ರಚಿಸಿದ್ದು, ಇದು ಮೂಢನಂಬಿಕೆಗೆ ಒಳಗಾಗಿದ್ದ ಜನರನ್ನು ಎಚ್ಚರಿಸಿರುವ ಸೂಕ್ಷ್ಮತೆ ಇಲ್ಲಿ ಕಂಡುಬರುತ್ತದೆ. ಇವುಗಳಲ್ಲದೇ ನೀರಿಗಾಗಿ ನಡೆಯುವ ಹಾಹಕಾರ, ನೀರನ್ನು ನಂಬಿರುವ ಜನರು ನೀರಿಗಾಗಿ ಹೋರಟ ಮಾಡಲು ಮುಂದಾಗುತ್ತಾರೆ. ಚೌಡಿಯ ಮಗನು ಜೈಲಿಗೆ ಹೋಗುವ ಸಂದರ್ಭ, ಆ ತಾಯಿಯ ರೋಧನೆ, ಅಲ್ಲಿಯ ಜನರ ಆಕ್ರೋಶ, "ನೀರಿಗಾಗಿ ರಕ್ತ ಕೊಟ್ಟೇವು, ನೀರು ಬಿಡಲ್ಲ" ಅಂತ ಸರ್ಕಾರವೇ ವ್ಯಾಜ್ಯ ನಡೆಸುತ್ತಿದೆ ಎಂಬುದನ್ನು ಇಲ್ಲಿ ನಾವು ಸಾಮಾಜಿಕ ಕಳಕಳ ಎಂದು ಗ್ರಹಿಸಬಹುದು.

ಜೈಲಿಗೆ ಹೋಗಿರುವ ಮಗನನಗನು ಕರೆತರಲು ಹರ ಸಾಹಸ ಪಡುವ ತಾಯಿ, ಇದಕ್ಕೆ ಯಾರು ಸಹ ಸಹಾಯ ಮಾಡದಿರುವುದು, ಆಸ್ತಿಯ ಮಾರಾಟ ಮಾಡುತ್ತೀನಿ ಅಂತ ಮುಂದೆ ಹೋದರು. ದಿಕ್ಕಿಲ್ಲದವಳು ಆಸ್ತಿಯನ್ನು ಕೊಂಡುಕೊಳ್ಳಲು ಯಾರು ಮುಂದೆ ಬರಲಿಲ್ಲ. ಇದರ ನಡುವೆಯೆ ಸ್ವಾರ್ಥಕ್ಕಾಗಿ ಎಂ.ಎಲ್.ಎ ಸೀಟು ಕೊಡುತ್ತೇವೆ ಎಂದಾಗ ರೈತರು ಹೋರಟವನ್ನೇ ಕೈಬಿಡುವುದು, ಜೊತೆಗೆ ಇಡೀ ನೀರು ಕದನದ ಸುತ್ತ ಚೌಡಿಯ ಆಕ್ರಂದನ ಹಾಗೂ ಅವಳ ಚಟುವಟಇಕೆ ಜನರನ್ನು ಎಚ್ಚರಿಸುವ ರೀತಿ ರಿವಾಜುಗಳು, ಅವಳನ್ನು ಸುತ್ತುವರಿದಿರುವ ಮಗನ ಪ್ರೀತಿ, ನಾಡಿನ ಅಭಿಮಾನ ಎಲ್ಲದರ ನಡುವೆಯು ಭತ್ತದ ಸೆಲೆಯಂತೆ ಮುದುಕಿಯು ಸೊರಗಿ ನಿಂತು ಪೋಲೀಸರ ದೌರ್ಜನ್ಯ ಖಂಡಿಸಿ ಧರಣಿ ಕೂತರು. ಅಲಂಕರಿಸಿದ ಶವದ ಮೆರವಣಿಗೆ ತೆಗೆದರು. ರೈತರ ಹೋರಾಟ ಚಿರಾಯುವಾಗಲಿ ಎಂದು ಮುಗಿಲು ಮುಟ್ಟುವಂತೆ ಮೊರೆಯಿಟ್ಟರು.

ಆಕ್ರಮಣ ಎನ್ನುವ ಕಥೆಯಲ್ಲಿಯು ಕೂಡ ಬಡತನದ ಮೇಲೆ ಯಾವ ರೀತಿಯ ನಯವಾದ ದೌರ್ಜನ್ಯ ನಡೆಯುತ್ತದೆ ಎಂಬುದನ್ನು ಹೆಸರೇ ಸೂಚಿಸುವಂತೆ ಸ್ತ್ರೀ ಮೇಲೆ ನಡೆಯುವ ಆಕ್ರಮಣಕಾರಿ ಬೆಳವಣಿಗೆ ಈ ಕಥೆಯಲ್ಲಿ ನಮಗೆ ಗೋಚರಿಸುತ್ತದೆ.

ಇಲ್ಲಿ ಪಿತೃಪ್ರಧಾನ ಪದ್ಧತಿಯು ಕಂಡುಬಂದರು ಅಸಹಾಹಕನಾದ ಗಂಡನನ್ನು ಸ್ತ್ರೀಯರು ತಮ್ಮ ಹೇಳಿಕೆಗೆ ಅನುಸಾರವಾಗಿ ನಡೆಸಿಕೊಳ್ಳುವ, ದಬಾಹಿಸುವ ಒಂದು ನೋಟವನ್ನು ಗಮನಿಸಬಹುದು.

ಈ ರೀತಿಯ ಚುಚ್ಚು ನುಡಿಗಳಿಂದಾಗಿ ಬೇಸತ್ತ ಗಂಡನಾದವನು ಸಮತೆಗೆ ಕೋಳಿ ಮಾರಲು ಹೊರಡುವನು. ಆದರೆ ಅವನ ಉಡುಗೆ ಗಮನಿಸಿದ ದಲ್ಲಾಳಿಗಳು ಅವನನ್ನು ದೃಷ್ಟಿಸಿಯು ನೋಡಲಿಲ್ಲ. ಈ ರೀತಿಯ ನಾನಾ ಬಗೆಯ ಸಮಸ್ಯೆಗಳು ಈ ಕಥಾ ಭಾಗದಲ್ಲಿ ಜೋಗಿಯೆ ಇಲ್ಲಿ ಪ್ರಧಾನ ಪಾತ್ರವಾಗಿ ಕಂಡುಬರುತ್ತಾನೆ. ಕೊನೆಯಲ್ಲಿ ಅವಳ ಮಗಳು ಮುಗ್ಧಳಾಗಿ 'ನಾಗಿ' ಎಂಬ ಹೆಸರಿನಲ್ಲಿ ನಮ್ಮ ಹೃದಯ ತುಂಬಿಕೊಳ್ಳುತ್ತಾಳೆ. ಒಲ್ಲದ ಗಂಡನಿಗೆ ಅವಳನ್ನು ಗಂಟು ಹಾಕಿ ಭಾರವನ್ನು ಇಳಿಸಿಕೊಳ್ಳಲು ಪ್ರಯತ್ನಿಸಿದ ತಂದೆ-ತಾಯಿ, ಅಕ್ಕ-ಭಾವ, ಇತರರ ವರ್ತನೆಗೆ ಬೇಸತ್ತ ನಾಗಿ ನೀರುಪಾಲಾಗುವಲ್ಲಿ ಕಥೆಯು ಪರಿಸಮಾಪ್ತಿಗೊಳ್ಳುತ್ತದೆ.

ಥೆಯ ಚೌಕಟ್ಟಿನಲ್ಲಿ ಇನ್ನೂ ಅನೇಕ ಸ್ವಾರಸ್ಯಕರವಾದ ಘಟನೆಗಳು ನಡೆದುಹೋಗುತ್ತವೆ. ಈ ಥೆಯಲ್ಲಿ ಸಂಭಾಷಣೆಯಲ್ಲಿ ಮಂಡ್ಯದ ಭಾಷೆ ಸೊಗಡನ್ನು ಸವಿಯಲು ಕಾಣಲು ಸಾಧ್ಯ.

ಸಾವು ಎಂಬುದು ಅಪ್ರಕಟಿತ ಕಾಥ ಸಾಹಿತ್ಯವಾಗಿದ್ದು, ಈ ಕಥೆಯಲ್ಲಿ ಒಬ್ಬ ಹುಡುಗನ ಚಿಂತಾಜನಕ ವ್ಯವಸ್ಥೆಗೆ ಅಲ್ಲಿನ ಸಾರ್ವಜನಿಕರು ಸಂಪೂರ್ಣವಾಗಿ ಸಹಕಾರ ನೀಡುವ ಮತ್ತು ಅದರಲ್ಲಿ ಯಶಸ್ವಿಯನ್ನು ಪಡೆಯುವ ಚಾಣಕ್ಷತನವನ್ನು ಹುಲ್ಲುಕೆರೆಯವರು ಕೃತಿಯಲ್ಲಿ ಕಟ್ಟುಕೊಟ್ಟಿದ್ದಾರೆ.

ಸಾಬು ಎನ್ನುವವನು ರಸ್ತೆಯಲ್ಲಿ ನಡೆದ ಭೀಕರ ಅಪಘಾತವನ್ನು ವೀಕ್ಷಿಸುತ್ತಾನೆ. ಇದರಿಂದ ಮಾನವೀಯತೆಯನ್ನು ಮೆರೆಯಲು ಹೋದ ಸಾಬುವು ಕಾರಿನಲ್ಲಿದ್ದವರನ್ನು ರಕ್ಷಿಸಲು ಮುಂದಾಗುತ್ತಾನೆ. ಪರಿಸ್ಥಿತಿ ಬಿಗಾಡಾಯಿಸಿ ಇವನ ತಲೆಗೆ ಕಟ್ಟಿಕೊಳ್ಳುವ ಸಂದರ್ಭ ಬಂದುಬಿಡುತ್ತದೆ. ಆದರೂ ಮಾನವೀಯತೆ ಮನುಷ್ಯ ಎಂಬ ಕರುಣೆಯಿಂದ ಅಲ್ಲಿ ಸಂಭವಿಸುತ್ತಾ ಅಲ್ಲಿ ಸಾವು-ನೋವುಗಳನ್ನು ವೀಕ್ಷಿಸುತ್ತ ಕರುಳು ಹಿಂಡಿದಂತಾಗಿ ಸೈಕಲನ್ನು ಬಿಡುಕುತ್ತಾರೆ.

ಒಂದು ಕಡೆ ಪೋಲೀಸರ ಭಯ. ಮತ್ತೊಂದು ಕಡೆ ನ್ಯಾಯ ದೊರಕಿಸಲು ಹಂಬಲ ಕೊಡುವುದು ಮತ್ತು ಸೈಕಲಿನವನದು ತಪ್ಪು ಎಂಬಂತೆ ಜನರು ಮಾತನಾಡುವುದು ಗಮನಿಸಿದ ಸಾಬು ದಿಗಿಲುಗೊಂಡು ಓಡತೊಡಗಿದ. ಕ್ಯಾಂಡಿ ಅಂಗಡಿಯ ಹತ್ತಿರ ರಕ್ಷಣೆಗೆ ನಿಂತ. ಆದರೆ "ಪಾಪಿ ಸಮುದ್ರಕ್ಕೆ ಹೋದರು ಮೊಣಕಾಲು ಉದ್ದ ನೀರು" ಎಂಬಂತೆ ಇಲ್ಲಿಯೂ ಸಹ ಅಪರಾದಗಳು ಕಾದಿತ್ತು. ಹೀಗೆ ಕಥೆಯೊಳಗೆ ಬರುವ ತಿರುವುಗಳನ್ನು ಕಟ್ಟಿಕೊಡುವಲ್ಲಿ ಬಹಳ ಅದ್ಭುತವಾಗಿ ಯಶಸ್ವಿಯಾಗಿದ್ದಾರೆ. ಕೇವಲ ಆ ಹುಡುಗನು ಮೌನವಾಗಿ ಇದ್ದುದರಿಂದ ಇಡೀ ಸಮಾಜವೇ ಪೀರು ಸಾಬುವಿನ ಮೇಲೆ ದೌರ್ಜನ್ಯ ಅಪರಾಧವನ್ನು ಮುಂದೆ ಇಟ್ಟುಕೊಂಡು ಜೊತೆಗೆ ಈ ಸಮಯದಲ್ಲಿ ಎರಡೂ ಧರ್ಮಗಳ ನಡುವೆ ನಡೆಯುವ ಧರ್ಮ ಯುದ್ಧವು ಕೂಡ ಇಲ್ಲಿ ರಮಣೀಯವಾಗಿ ರಚಿತಗೊಂಡಿದೆ. ಇಲ್ಲಿ ಧರ್ಮದ ವಿರುದ್ಧ ಹಾಗೂ ಪೋಲೀಸರ ದೌರ್ಜನ್ಯ ಎಲ್ಲವನ್ನು ನಾವು ಎದುರಿಸಬಹುದು. ಹುಲ್ಲುಕೆರೆಯವರು ಜಾತಿ, ಧರ್ಮ, ಭಾಷೆ, ಬಡತನ ಎಲ್ಲವನ್ನು ಬಹಳ ಅಚ್ಚುಕಟ್ಟಾಗಿ ಸರಳವಾಗಿ 'ಸಾವು' ಕಥೆಯಲ್ಲಿ ನಿರ್ಮಿಸಿದ್ದಾರೆ. ಆದರೆ ಆ ಹುಡುಗನ ತಪ್ಪು ಸರಿಗಳನ್ನು ಕಂಡ ಸಾರ್ವಜನಿಕರು ನ್ಯಾಯಯುತವಾದ ಹೋರಾಟಕ್ಕೆ ಇಳಿದರು.

ಮುಸ್ಲಿಂ ಜನಾಂಗದ ಜನರು ಪೀರು ಸಾಬುವಿನ ತಪ್ಪಿಲ್ಲ. ಆ ಹುಡುಗ ಅಂಗಡಿಗೆ ನುಗ್ಗಿ ಕ್ಯಾಂಡಿ ಕದ್ದುದರಿಂದಲೆ ಇಷ್ಟೆಲ್ಲಾ ಆದುದು ಎಂದು ಮುಸ್ಲಿಂ ನಾಯಕರು ವಾದ ಮಾಡಿದರು. ಈ ವಿಚಾರವು ಡಿ.ಸಿ ಇನ್ನು ಮೇಲಾಧಿಕಾರಿವರೆಗೂ ಹೋಗುತ್ತದೆ. ಆದರೆ ದರಾದೃಷ್ಟ ಅವನಿಗೆ ತಂದೆ-ತಾಯಿಗಳು ಇಲ್ಲದ್ದರಿಂದ ಯರು ಸಹ ಬಿಡುಗಡೆಯಾಗುವ ಸಮಯಕ್ಕೆ ಮುಂದೆ

ಬರುವುದಿಲ್ಲ. ಹೀಗೆ ಅನೇಕ ತಿರುವುಗಳು ಹುಟ್ಟಿಕೊಳ್ಳುವಂತೆ ಸನ್ನಿವೇಶ ರಚನೆ ಮಾಡಿ ಕಥೆ ಸ್ವರೂಪವನ್ನು ಕುತೂಹಲ ಹುಟ್ಟುವಂತೆ ರಚಿಸಿದ್ದಾರೆ. "ಕನಸುಗಳು" ಎಂಬ ಲೇಖನವು ಕೂಡ ಅಷ್ಟೇ ಸ್ವಾರಸ್ಯಕರವಾಗಿದ್ದು ಲೇಖಕರ ತಾಳ್ಮೆಯನ್ನು ಪರೀಕ್ಷಿಸಲಾಗುತ್ತದೆ. ಏಕೆಂದರೆ ಈ ಕಥೆಯಲ್ಲಿ ಬರುವ ಸಮಯ ಪ್ರಜ್ಞೆಯು ಓದುಗರ ಕುತೂಹಲ ಹೆಚ್ಚಿಸುತ್ತದೆ. ಇಲ್ಲಿ ಹೆಸರೇ ಸೂಚಿಸುವಂತೆ ಕನಸುಗಳನ್ನು ಕುರಿತು ಹೇಳುವ ಕತೆಗಳು ಇನ್ನು ಪ್ರಕಟಿತವಾಗಿಲ್ಲ. ಇದು ವಿಷಾಧನೀಯ ವಿಚಾರ. ಮತ್ತೊಂದು ಕಥೆಯಾದ ಕಣ್ಣಳತೆಯಾಗಿಲ್ಲ. ಈ ಒಂದು ಕಥೆಯು ಸಹ ರಚಿತವಾಗಿದ್ದು ಅಪ್ರಕಟಿತವಾಗಿದೆ. ಇದು ಸಾಮಾಜಿಕ ಹಿನ್ನೆಲೆ ಉಳ್ಳದ್ದು. ಇವುಗಳಲ್ಲದೆ ದೊರೆ ಲಂಕೇಶ್ವರ, ದೇವರಾಗು, ಕೊಳಲ ಗೆಳೆಯರು ಹೀಗೆ ಅನೇಕ ನಾಟಕಗಳು ರಚನೆಯಾಗಿದ್ದು, ಇವು ಸಹ ಪ್ರಕಟಿತವಾಗಿರುವುದಿಲ್ಲ.

## ಅಧ್ಯಾಯ – ೮

## ರಮೇಶ ಹುಲ್ಲುಕೆರೆಯವರ ಕಥಾ ಸಾಹಿತ್ಯದ ಒಟ್ಟು ನೋಟ

ಕಳೆದ ಮೂರು ದಶಕಗಳಿಂದ ಸಾಹಿತಯ ಹಾಗೂ ಪತ್ರಿಕಾ ಕ್ಷೇತ್ರಗಳಲ್ಲಿ ಅತ್ಯಂತ ಚಿರಪರಿಚಿತರಾದವರು ಶ್ರೀ ರಮೇಶ ಹುಲ್ಲುಕೆರೆ ಅವರ ವೈಶಿಷ್ಟಯವೆಂದರೆ ಮಂಡ್ಯದ ಆಡು ಮಾತಿನ ಬನಿಯನ್ನು ತಮ್ಮ ಕೃತಿಗಳನ್ನು ಸಮರ್ಥವಾಗಿ ಬಳಸಿಕೊಳ್ಳುವ ಶಬ್ದವನ್ನು ಎಲ್ಲರೂ ಬಳಸುತ್ತಾರೆ. ಬಳಸದ ಶಬ್ಧದ ಸುತ್ತ ಓದು ಆವರಣವನ್ನು ಸೃಷ್ಟಿಸುವುದು ಇದೆಯಲ್ಲ ಅದು ಬಲು ಕಷ್ಟ. ಆದರೆ ರಮೇಶ ಹುಲ್ಲುಕೆರೆಯವರ ಶಬ್ಧ ಪ್ರಯೋಗಗಳು ಆವರಣವನ್ನು ಸೃಷ್ಟಿಸಿ ಭಾವಾಭಿವ್ಯಕ್ತಿಯನ್ನು ವಿಸ್ತರಿಸುತ್ತವೆ.

ಮಂಡ್ಯದ ಭಾಷೆ ಗಂಡು ಮೆಟ್ಟಿದ ಭಾಷೆ. ಭಾಷೆ, ಶಬ್ಧಗಳು ಮೇಲ್ನೋಟಕ್ಕೆ ಒರಟೆನಿಸಿದರು ಆಂತರ್ಯದಲ್ಲಿ ಸುಮಧುರ ಹಾಗೂ ಬಹುಪರಿಣಾಮಕಾರಿಯಂತೆ ರಮೇಶ ಹುಲ್ಲುಕೆರೆಯವರು ಕೃತಿಗಳು ಒಂದು ಪ್ರವೇಶವನ್ನು ಪರಿಚಯಿಸುತ್ತ ವಿಶ್ವ ವ್ಯಾಪ್ತಿಯಾಗುತ್ತದೆ. ಗ್ರಾಮೀಣ ಮತ್ತು ನಾಗರೀಕ ಅನುಭವ ಎರಡನ್ನು ತಾರಕ ಸಂದರ್ಭದಲ್ಲಿ ಸೇರಿಸು ಪ್ರಯತ್ನ ಸಾಹಿತ್ಯದ ಮೂಲಕ ವ್ಯಕ್ತವಾಗುತ್ತದೆ. ಸರ್ವೋದಯ ಹಾಗೂ ಪ್ರಗತಿಶೀಲ ಚರಿತ್ರೆಯಲ್ಲಿದೆ. ಆ ಗುಂಪಿಗೆ ಸೇರಿದವರು ರಮೇಶ ಹುಲ್ಲುಕೆರೆಯವರು.

ರಮೇಶರವರು ವೃತ್ತಿ ಪ್ರವೃತ್ತಿಯಲ್ಲಿ ವ್ಯತ್ಯಾಸ ಕಾಣುವುದಿಲ್ಲ. ಯಾವುದೇ ಸಾಹಿತಿಗೆ ಧಾರ್ಮಿಕ ಬದ್ಧತೆಗಿಂತ ಸಾಮಾಜಿಕ ಬದ್ಧತೆ ಅನಿವಾರ್ಯವಾದುದು. ಅಂತಹ ಸಾಮಾಜಿಕ ಬದ್ಧತೆಯನ್ನು ಮೈಗೂಡಿಸಿಕೊಂಡಿರುವ ರಮೇಶರವರು ಲೇಖಕರಿಗೆ ಇರಬೇಕಾದ ಸರ್ವಗ್ರಾಸ ದೃಷ್ಟಿಯನ್ನು ಸಾಧಿಸಿದ್ದಾರೆ. ಹುಲ್ಲುಕೆರೆಯವರ ಸಾಹಿತ್ಯದಲ್ಲಿ ಸಜ್ಜನಿಕೆ, ನಿರ್ಭೀತ, ಮಾನವತವಾದಿ, ಅವರ ತತ್ವ, ನಿಷ್ಟೆ, ಧೋರಣೆ ಅವರು ರಾಜಿಗೊಪ್ಪದ ಸ್ವಭಾವ ಮೆಚ್ಚುವಂತದ್ದು. ಅಲ್ಲದೇ ಮೌಲ್ಯ ಆರಾಧಕರು ಹಾಗೂ ಮಾತಿನಲ್ಲಿ ಬದ್ಧತೆ ಉಳ್ಳ ವ್ಯಕ್ತಿ. ಯಾವುದೇ ರೀತಿಯ ಚಳುವಳಿಗೆ ಅಭಿವ್ಯಕ್ತಿ ನೀಡಿದ ಸಾಹಿತ್ಯ ಪಾತ್ರಗಳು ಸೋಲುವ, ಮಾಗುವ, ಸಹ್ಯವಾಗುವ, ಶೋಧಿಸುವ ರೀತಿ ಉತ್ತಮದ್ದಾಗಿದೆ. ರಮೇಶ ಹುಲ್ಲುಕೆರೆಯವರ ಅನುಭವ ಮತ್ತು ಕಲಾತ್ಮಕತೆಯನ್ನು ಸಮ ಪ್ರಮಾಣದಲ್ಲಿ ಬೆಳೆಸಿಕೊಂಡಿದ್ದಾರೆ. ಮತ್ತು ಈ ದೇಶೀಯ ಭಾಷೆ ದೃಷ್ಟಿಯಿಂದ ಜಿಲ್ಲೆಯ ಇತರ ಸಾಹಿತಿಗಳಗಿಂತ ಅವರು ಭಿನ್ನವಾಗಿದ್ದಾರೆ ಎಂದರೆ ಮಂಡ್ಯ ಜಿಲ್ಲೆಯ ಪ್ರತಿಭಾವಂತ ಕಥೆಗಾರ ರಮೇಶ ಹುಲ್ಲುಕೆರೆಯವರ ವಿಷಯದಲ್ಲಿ ಬಹುಶಃ ಯಾವುದೇ ಭಿನ್ನಾಭಿಪ್ರಾಯವಿಲ್ಲ ಎಂಬುದು ಶಕ್ತ ಅಭಿಪ್ರಾಯ.

ಇನ್ನು ಸಣ್ಣ ಕಥೆಗಳನ್ನು ಅವಲೋಕಿಸಿದಾಗ ಹುಲ್ಲುಕೆರೆಯವರು ೧೯೬೮ ರಿಂದಲೂ ಕಥೆಗಳನ್ನು ಬರೆಯುತ್ತ ಬಂದವರು. ತಮ್ಮ ಏಳು ಕಥೆಗಳನ್ನು ಸಾಕ್ಷಿ ಕಥೆಯಲ್ಲಿ ಅಳವಡಿಸಿ ಅವುಗಳ ಪಾತ್ರಕ್ಕೆ

ಮೆರಗು ತಂದಿದ್ದಾರೆ. ಪ್ರಯೋಗಶೀಲ ಲೇಖಕರಾದ ಇವರು ಕಥೆಯಿಂ ಕಥೆಗೆ ಬೆಳೆಯುತ್ತ ಹೋಗಿ ಕ್ರಮೇಣ ತನ್ನ ಪರಿಸರದಲ್ಲಿ ತನ್ನನ್ನು ಗುರುತಿಸಿಕೊಂಡಿರುವುದು ಆಶಾದಾಯಕವಾಗಿದೆ.

ರಮೇಶ ಹುಲ್ಲುಕೆರೆಯವರ ಸಾಕ್ಷಿ ಕಥಾಸಂಕಲನದಲ್ಲಿ ಒಂದೆರಡನ್ನು ಹೊರತುಪಡಿಸಿದರೆ ಉಳಿದವು ಪ್ರಾದೇಶಿಕ ಎನ್ನಬಹುದು. ವಿಶಿಷ್ಟ ಸ್ವರೂಪದ ರಚನೆಗಳಲ್ಲಿ ನೆರವೇರಿವೆ. ಇಲ್ಲಿ ಮಂಡ್ಯ ಜಿಲ್ಲೆಯ ಹೃದಯ ಸ್ಥಾನವೆನಿಸಿಕೊಂಡಿರುವ ತಾಲ್ಲೂಕಿನ ಹುಟ್ಟೂರಿನ ಭಾಷೆಯ ಖನಿ, ಜೀವನದ ಧ್ವನಿ ಈ ಎರಡೂ ಇವರ ಬರಹಗಳಲ್ಲಿ ಪರಿಣಾಮಕಾರಿಯಾಗಿ ಧ್ವನಿತವಾಗಿವೆ.
ಪ್ರಸ್ತುತ ಸಾಕ್ಷಿ ಸಂಕಲನದಲ್ಲಿ ಗೆದ್ದಲು, ಸೋಲು, ಅಸಂಘತ ಈ ಮೂರು ಒಂದುವರ್ಗ ಕತೆಗಳಾದರೆ ಉಳಿದ ಸಿದ್ಧತೆ, ಸಾಕ್ಷಿ, ಸ್ಥಿತಿ ಮತ್ತು ಆಕ್ರಮಣ ಇವು ಮತ್ತೊಂದು ವರ್ಗದ ಕತೆಗಳು. ಮೊದಲ ಮೂರು ಕತೆಗಳಲ್ಲಿ ನಾಗರೀಕ ಆವರಣದಲ್ಲಿ ಅರಳಿ ಪ್ರತ್ಯೇಕವಾಗಿ ಉಳಿದರೆ ಕೊನೆಯ ನಾಲ್ಕು ಕತೆಗಳಲ್ಲಿ ವಿಶಿಷ್ಟ ಗ್ರಾಮೀಣ ಆವರಣದಲ್ಲಿ ಮೂಡಿಬಂದಿದೆ. ಹುಲ್ಲುಕೆರೆಯವರ ಕಥನ ಕಲೆ ಮೂರು ಕತೆಗಳಲ್ಲಿ ಬಂದು ನಾಲ್ಕು ಕತೆಗಳಲ್ಲಿ ಅದಕ್ಕೊಂದು ಸ್ಪಷ್ಟವಾದ, ಸಹಜವಾದ, ದಷ್ಟವಾದ ಪಾತ್ರಗಳು ಲಭ್ಯವಾಗಿದೆ. ಅದರ ನಡುವೆ ಕತೆಗಾರನ ಅನುಭವ, ಪ್ರತಿಮೆಗಳು ಸಮರಸಗೊಂಡು ಉತ್ತಮ ಕತೆಗಳು ಸೃಷ್ಟಿಯಾಗಿವೆ.

ಸಾಕ್ಷಿ ಕತೆಯಲ್ಲಿ ಕಂಡುಬರುವ ಸನ್ನಿವೇಶಗಳು ಬರವಣಿಗೆಯ ಶಕ್ತಿಯನ್ನು ಹೊರಗೆ ಹಚ್ಚಿ ನೋಡಬಹುದಾದ ಒಳ್ಳೆಯ ರಚನೆಗಳಾಗಿವೆ. ಹಳ್ಳಿ ಜೀವನದ ಎಳೆ ಎಳೆಯನ್ನು ಬಿಡಿಸಿ ಕತೆಗಾರರು ಸುಂದರ ಕಲಾಕೃತಿಗಳನ್ನು ರಚಿಸಿದ್ದಾರೆ. ಅದರ ಬಳಕೆ ಮಾತಿ ಪ್ರಯೋಗ, ಪಾತ್ರಗಳ ಬೆಳವಣಿಗೆ, ಸಂಭಾಷಣೆಯ ಸೊಗಸು, ಗಾದೆಗಳ ಹೇರಳ ಬಳಕೆ, ಸಹಜವಾದ ಭಾಷೆಯ ಸೊಗಡು, ನಿರರ್ಗಳವಾಗಿ ಸಾಗುವ ಶೈಲಿ ಅಲ್ಲಲ್ಲಿ ಮನಸ್ಸನ್ನು ಸೆಳೆಯುವ ವರ್ಣನೆಗಳು ಈ ಕತೆಯ ತೂಕವನ್ನು ಹೆಚ್ಚಿಸವೆ.

ಮಂಡ್ಯ ಹಳ್ಳಿಗಳ ದಟ್ಟ ಹಸಿರಿನ ನಡುವೆಯು ಬಡತನದ ನಿಟ್ಟುಸಿರು ಮನಸ್ಸನ್ನು ಮಿಡಿಯುತ್ತವೆ. ಕತೆಗಳನ್ನು ನರೂಪಿಸುವಲ್ಲಿ ಕತೆಗಾರರು ಅನುಸರಿಸುವ ನವ್ಯ ಮಾರ್ಗವು ಗಮನಾರ್ಹವಾದುದು. ಒಂದೊಂದು ಪಾತ್ರದ ಅಂತರಂಗವನ್ನು ವಿಶ್ಲೇಷಿಸಿ ಭಾಷೆಗಳ ಪರಂಪರೆಗಳನ್ನು ಕತೆಗಳ ಮೈಗೆ ತುಂಬಿ ಹೊಸ ಚೈತನ್ಯವನ್ನು ಮೂಡಿಸಿದ್ದಾರೆ. ಇನ್ನು ನಾಟಕವನ್ನು ನೋಡುವುದಾದರೆ ಮಂಥರೆ ದೊರೆ ಲಂಕೇಶ್ವರದಂತಹ ನಾಟಕಗಳಲ್ಲಿಯು ಸಹ ಸ್ತ್ರೀ ಪಾತ್ರ ಪೋಷಣೆ ಮಾಡಿರುವುದು ಕಣ್ಣಿಗೆ ಕಟ್ಟುವಂತಿದೆ. ಕುವೆಂಪುರವರು ಗುರುತಿಸಿರುವ ಸ್ತ್ರೀ ಪಾತ್ರಗಳ ಪರಿಚಯವು ಯಾರಿಂದಲೂ ಸಾಧ್ಯವಾಗಿಲ್ಲ. ಅವರ ಒಂದು ಪ್ರಯತ್ನವನ್ನು ಹುಲ್ಲುಕೆರೆಯವರು ಕೈಗೊಂಡಿದ್ದಾರೆ. ಇಲ್ಲಿ ಮಂಥರೆ ನಾಟಕದ ಮೇಲೆ 'ಶ್ರೀ ರಾಮಾಯಣ ದರ್ಶನಂ'ನ ನಿಚ್ಚಳ ಪ್ರಭಾವವಿದೆ. ಇಲ್ಲಿ ಮಂಥರೆಯು ನಾಟಕದ ಮೊದಲಲ್ಲಿ ಪಾಪಿಯು ದೈಹಿಕವಾಗಿ ಹಾಗೂ ಮಾನಸಿಕವಾಗಿ ಕ್ರೂರಿಯಂತೆ ಕಂಡುಬರುವ ಮಂಥರೆ ಉದ್ಧಾತ್ತ

ಮಾನವನು ಸರ್ವರಲ್ಲು ಪ್ರೀತಿ ಪ್ರೇಮವನ್ನು ಕಾಣುವ ಶ್ರೀರಾಮನ ಸಾಕ್ಷತ್ಕಾರದಿಂದ ಪುನೀತಳಾಗಿ ರಾಮನಾಮವನ್ನು ಜಪಿಸುತ್ತ ಮಾತೃ ಸ್ವರೂಪಿಯಾಗಿ ನಿರ್ಗಮಿಸುವಳು. ಮಂಥರೆ ರಾಮನನ್ನು ಕಾಡಿಗೆ ಕಳಸುವಂತೆ ಕೈಕೆಗೆ ಪ್ರೇರೇಪಿಸುವಲ್ಲಿ ವಾಸ್ತವ ಬದುಕಿಗೆ ಬಹಳ ಹತ್ತಿರದವಳಾಗಿ ನಮಗೆ ಕಂಡು ಬರುತ್ತಾಳೆ. ಒಟ್ಟಿನಲ್ಲಿ ಮೂಲ ರಾಮಾಯಣಕ್ಕು, ಮಂಥರೆ ನಾಟಕಕ್ಕು ಅಷ್ಟೇನು ವ್ಯತ್ಯಾಸಗಳಲ್ಲ. ಮೂಲ ಕಾವ್ಯದ ರೂಪವನ್ನು ಇಲ್ಲಿ ದೃಷ್ಯ ಮಾಧ್ಯಮಕ್ಕೆ ಅಳವಡಿಸಿರುವುದು ವಿಶೇಷ.

ಇವುಗಳಲ್ಲದೆ ವೀಕ್ಷಕ ದಿನ ಪತ್ರಿಕೆ ಸಂಪಾದಕರಾಗಿ ಅನೇಕ ವಿಚಾರ ವಿಮರ್ಶೆಗಳನ್ನು ಉದಯೋನ್ಮುಕ ಕವಿಗಳನ್ನು ಸೃಜಿಸುವ ಸೃಜನಾತ್ಮಕ ಕಾವ್ಯ ಈ ಪತ್ರಿಕೆಯ ಮೂಲಕ ನೆರವೇರಿದೆ. ಇಲ್ಲಿ ರಾಜಕೀಯ, ಶಿಕ್ಷಣ, ಬಡತನ, ಸ್ತ್ರೀ ಶೋಷಣೆ, ಜಾತೀಯತೆ, ಸಾಮಾಜಿಕ ಸೇವೆ, ಸಂಘಟಣೆ ಇಂತಹ ಕಾರ್ಯಗಳು ಇವುಗಳ ಮೂಲಕ ಊರ್ಜಿತ ಆಗಿವೆ. ಇವುಗಳೇ ಅಲ್ಲದೆ ಜಿಲ್ಲೆಯಲ್ಲಿ ಪ್ರಥಮವಾಗಿ ಹೊರೆಯಾಗದ ಸರಳ ಮದುವೆಗಳ ಅನುಷ್ಠಾನ, ಮೂಢನಂಬಿಕೆಗಳ ವಿರುದ್ಧ ಚಳುವಳ, ಅಸ್ಪೃಷ್ಯತೆ ವಿರುದ್ಧ ಸಮರ ಅನೇಕ ನಾಲೆಯ ಚಳುವಳಗಳಗೆ ವೀಕ್ಷಕ ಪತ್ರಿಕೆ ಮೂಲಕ ಸಕ್ರೀಯವಾದ ಪಾಲುದಾರಿಕೆ ನೀಡಿದರು.

ಕನ್ನಡ ನಾಡು ನುಡಿ ಚಿಂತನೆಯನ್ನು ಸಕ್ರೀಯವಾಗಿ ಜನಾಂದೋಲನದಲ್ಲಿ ಹೋರಾಟ ಆರಂಬಿಸುತ್ತಾರೆ. ಹೀಗೆ ಅನೇಕ ರೀತಿಯ ಸಾಹಿತ್ಯ ಆರಾಧಕರಾಗಿರುವುದು ನಾವು ಕಾಣು ಸರಳ ಸಜ್ಜನಿಕೆಯ ಉತ್ಸಾಹಿರೂಪದ ವ್ಯಕ್ತಿಯಾಗಿ ಶ್ರೀ ಹುಲ್ಲುಕೆರೆಯವರು ಮರೆಯಲಾಗದವರು. ಇವರು ತಮ್ಮ ಅಪೂರ್ವ ಕೃತಿಗಳ ಮೂಲಕ ನಾಡಿನ ಖ್ಯಾತ ಕತೆಗಾರರಾಗಿರುವ ರಮೇಶ ಹುಲ್ಲುಕೆರೆಯವರು ಖ್ಯಾತ ಕತೆಗಾರ ಡಾ||ಬೆಸಗರಹಳ್ಳಿ ರಾಮಣ್ಣನವರ ಸಮಕಾಲೀನರು. ಒಂದರ್ಥಲ್ಲಿ ಡಾ||ಬೆಸಗರಹಳ್ಳಿ ರಾಮಣ್ಣನವರಿಗಿಂತ ಭಿನ್ನವಾಗಿ ಗ್ರಾಮೀಣ ಪರಿಸರವನ್ನು ಅರ್ಥವತ್ತಾಗಿ ಕಟ್ಟಿಕೊಟ್ಟಿದ್ದಾರೆ ಎಂದರೆ ಅತಿಶಯೋಕ್ತಿಯಲ್ಲ.

## ಅಧ್ಯಾಯ – ೯

### ಉಪಸಂಹಾರ

ಕಳೆದ ಮೂರು ದಶಕಗಳಿಂದ ಸಾಹಿತ್ಯ ಮತ್ತು ಪತ್ರಿಕಾ ಕ್ಷೇತ್ರಗಳಲ್ಲಿ ಅತ್ಯಂತ ಚಿರಪರಿಚಿತರಾಗಿರುವ ರಮೇಶ ಹುಲ್ಲುಕೆರೆಯವರ ವೈಶಿಷ್ಟ್ಯವೆಂದರೆ ಮಂಡ್ಯದ ಆಡು ಮಾತಿನ ಧ್ವನಿಯನ್ನು ತಮ್ಮ ಕೃತಿಗಳಲ್ಲಿ ಸಮರ್ಥವಾಗಿ ಬಳಸಿಕೊಳ್ಳುವುದು ಶಬ್ಧವನ್ನು ಎಲ್ಲರು ಬಳಸುತ್ತಾರೆ. ಬಳಸಿದ ಶಬ್ಧದ ಸುತ್ತ ಒಂದು ಆವರಣವನ್ನು ಸೃಷ್ಟಿಸುವುದು ಕಷ್ಟದ ಕೆಲಸ. ಆದರೆ ರಮೇಶ ಹುಲ್ಲುಕೆರೆಯವರು ಶಬ್ಧ ಪ್ರಯೋಗಗಳ ಆವರಣವನ್ನು ಸೃಷ್ಟಿಸಿ ಭಾವ ಅಭಿವ್ಯಕ್ತಿಯನ್ನು ವಿಸ್ತರಿಸುತ್ತವೆ.

ಕನ್ನಡ ಸಮರ್ಥ ಲೇಖಕರಲ್ಲಿ ಒಬ್ಬರಾದ ರಮೇಶ ಹುಲ್ಲುಕೆರೆಯವರು ಏಳು ಕತೆಗಳ ಸಂಗ್ರಹ ಸಾಕ್ಷಿ ಎಂಬ ಕಥಾಸಂಕಲನಾ ವೈವಿಧ್ಯಮಯವಾಗಿವೆ. ಈ ಕತೆಗಳಲ್ಲಿ ಹುಟ್ಟು ಸಾವಿನ ನಡುವಿನ ಗಂಭೀರ ಸಮಸ್ಯೆಗಳು ಸಹಜವಾಗಿ ಕತೆಯಾಗಿವೆ. ಇದುವರೆಗೆ ನಾವು ವಿವರವಾದ ಅಧ್ಯನಯನ ಮಾಡಿದಾಗ ಹುಲ್ಲುಕೆರೆಯವರು ಸಾಹಿತ್ಯ ಕೃಷಿಗೆ ಮಾಡಿದ ಸಾಧನೆ ಅಲ್ಪವಾದರು ಆಸಕ್ತಿಪೂರ್ಣವಾದ ಸತ್ವಪೂರ್ಣವಾದ ಬರಹಗಳ ಮೂಲಕ ಸಹೃದಯ ಮಿತ್ರರನ್ನು ಬೆರಗುಗೊಳಿಸಿ, ಮುದಗೊಳಿಸಿ ಸಾಹಿತ್ಯ ಪ್ರಿಯರಿಗೆ ಉಣಬಡಿಸಿದ್ದಾರೆ. ಇವುಗಳಲ್ಲದೆ ನಾಟಕಗಳು, ಕಾದಂಬರಿ, ವಿಮರ್ಶೆಗಳು, ಸಂಪಾದಿತ ಕೃತಿಗಳು, ಲೇಖನಗಳು ಹೀಗೆ ನಾನಾ ರೀತಿಯ ಸಾಹಿತ್ಯ ಪ್ರಕಾರಗಳನ್ನು ಪರಿಚಯಿಸಿರುವ ಕೃತಿಗಳನ್ನು ನಾವು ನೋಡಬಹುದು. ರಮೇಶ ಹುಲ್ಲುಕೆರೆಯವರು ಕ್ರಾಂತಿಕಾರಕವಾದ ರೀತಿಯಲ್ಲಿ ಸಮಾಜದ ಅಂಕು ಡೊಂಕುಗಳನ್ನು, ಅನ್ಯಾಯ ಅನಾಚಾರಗಳನ್ನು ಟೀಕಿಸಿ ಉಗ್ರವಾಗಿ ವಿಡಂಭಿಸಿ ಕೃತಿ ರಚನೆ ಮಾಡಿದವರು. ಇಲ್ಲಿ ಗಾತ್ರ-ಪಾತ್ರಗಳಲ್ಲಿ ನಿಸ್ಸಂದೇಹವಾಗಿ ಮೆರೆದಿರುವುದು ಸ್ಪಷ್ಟವಾಗಿದೆ. ಪ್ರಕೃತಿಯ ಮಡಿಲಲ್ಲಿ ಉದುಗಿದ ನಾಲ್ಕಾರು ಹಳ್ಳಿಗಳ ವಿವಿಧ ಜಾತಿಯ, ವಿವಿಧ ವರ್ಗಗಳ, ಮನೋಧರ್ಮದ, ಸಂಪ್ರದಾಯಗಳ ಜನಜೀವನವನ್ನು ಅತೀ ಉಜ್ವಲವು, ಅನಾದೃಶ್ಯವು ಆದ ರೀತಿಯಲ್ಲಿ ಪ್ರಕೃತಿಯ ರಸತ್ವಕ್ಕೆ ಜೀವ ತುಂಬಿದ್ದಾರೆ. ಇಷ್ಟೇ ಅಲ್ಲದೆ ಸಂಘಟನೆಗಳ ಮೂಲಕ, ಸಮಾಜ ಸೇವೆಗಳ ಮೂಲಕ ತಮ್ಮ ಹೆಸರು ಅಜರಾಮರವಾಗಿ ಉಳೀಯುವಂತೆ ಮಾಡಿದ್ದಾರೆ. ಕೇವಲ ಹೆಸರು ಗಳಿಸುವ ಉದ್ದೇಶವನ್ನು ಇಟ್ಟುಕೊಳ್ಳದೆ ತಮ್ಮ ಜಿಲ್ಲೆಯ ಪರಿಸರ ಕಾಳಜಿಯಿಂದ ಜನರ ಧ್ವನಿ ಖನಿಯನ್ನು ಗುರುತಿಸಿ ಅವರಿಗೆ, ಒಗ್ಗುವ, ಅರಿಯುವ, ತಿದ್ದುಕೊಳ್ಳುವ, ಅರ್ಥವಾಗುವ ಭಾಷೆಯನ್ನು ಬಳಸಿ ಜಿಲ್ಲೆಯ ಭಾಷೆಯ ಸೊಗಡನ್ನು ಕೃತಿಯ ಮೂಲಕ ಅಭಿವ್ಯಕ್ತಿಸಿದ್ದಾರೆ. ಅಲ್ಲದೆ ತಮ್ಮ ಪತ್ರಿಕಾ ಸಂಘಟನೆಯ ಮೂಲಕ ಮೂಢನಂಬಿಕೆಗಳನ್ನು,

ಜಾತಿಯತೆಯನ್ನು, ಸಾಮಾಜಿಕ ಆರ್ಥಿಕ ಕ್ರಾಂತಿಯನ್ನು ಪ್ರಸ್ತುತ ಪಡಿಸುವ ಚಾಣಕ್ಷತೆಯನ್ನು ಬರೆಯುವುದರ ಮೂಲಕ ಸಪ್ತ ಲೇಖಕರು ಎನಿಸಿಕೊಂಡರು. ಇಷ್ಟೆ ಅಲ್ಲದೆ ಸಾರ್ವಜನಿಕ ಸೇವೆಗಳು ಎನ್ನುವ ಕಾವೇರಿ ಹೋರಾಟ, ವರುಣ ನಾಲಾ ಹೋರಾಟಗಳನ್ನು ಕೈಗೊಳ್ಳುವುದರ ಮೂಲಕ ಜಿಲ್ಲೆಗೆ ಅಗ್ರಗಣ್ಯರ ಸಾಲಿನಲ್ಲಿ ನಿಲ್ಲುತ್ತಾರೆ ಮತ್ತು ರಾಜಕೀಯವಾಗಿಯು ತಮ್ಮ ಕಸರತ್ತು ನಡೆಸಿದ್ದಾರೆ.

ಇಲ್ಲಿಯ ವರೆಗೆ ನಾವು ರಮೇಶ ಹುಲ್ಲುಕೆರೆಯವರ ಸಾಹಿತ್ಯದ ವಿವಿಧ ರಂಗಗಳ ಬೇಸಾಯವನ್ನು ನಾವು ವಿವರವಾಗಿ ತಿಳದುಕೊಂಡೆವು. ಇದರಿಂದ ನಾವು ವಿಷಾಧ ಪಡುವುದೇನೆಂದರೆ ಅವರು ಬದುಕಿ ಉಳಿಯದೆ ಹೋಗಿರುವುದು ವಿಷಾಧನೀಯ. ಅವರ ಕೃತಿಗಳು ಬದುಕಿರುವುದು ಶ್ಲಾಘನೀಯ.

## ಪರಮಾರ್ಶನ ಗ್ರಂಥಗಳು

೧. ಸಾಹಿತ್ಯ ಶೋಧನ – ಡಾ॥ಹೆಚ್.ಜೆ.ಲಕ್ಕಪ್ಪಗೌಡ

೨. ಅಭಿವ್ಯಕ್ತಿ – ಕ್ಯಾತನಹಳ್ಳಿ ರಾಮಣ್ಣ – ಲೇಖನ ಸಂಪಾದಕರು (ರಾಗೌ)

೩. ಡಿ.ಲಿಂಗಯ್ಯ – ಲೇಖನ

೪. ಡಾ॥ಜಿ.ಸಂ.ಪರಮಶಿವಯ್ಯ – ಸಾಕ್ಷಿ ಕದನದ ವಿಮರ್ಶಾ ಲೇಖನ

೫. ಸಿ.ಎನ್.ರಾಮಚಂದ್ರನ್ – ಪರಂಪರೆ ಪ್ರತಿರೋಧ

೬. ಬೆಟ್ಟೇಗೌಡ ಸೆಣಬದಕೊಪ್ಪಲು – ಪುಣ್ಯಕೋಟಿ

೭. ಹಾ.ಮಾ.ನಾಯಕ – ಹೊಸಗನ್ನಡದ ಅರುಣೋದಯ

೮. ಡಿ.ಆರ್.ನಾಗರಾಜ್ – ಸಾಹಿತ್ಯ ಕಥನ

೯. ರೆಹಮತ್ ತರೀಕೆರೆ – ಮಾತು ತಲೆ ಎತ್ತುವ ಬಗೆ ಸಂಪಾದಕ (ಕನ್ನಡ ಸಾಹಿತ್ಯ ಮೀಮಾಂಸಕ)

**********************************************************************

## ಆಕಾರ ಗ್ರಂಥಗಳು

೧. ಮಂಥರೆ – ರಮೇಶ ಹುಲ್ಲುಕೆರೆಯವರು

೨. ಸಾಕ್ಷಿ – ರಮೇಶ ಹುಲ್ಲುಕೆರೆಯವರು

೩. ತೆಂಡೆ – ರಮೇಶ ಹುಲ್ಲುಕೆರೆಯವರು

೪. ಸೊಗಡು – ರಮೇಶ ಹುಲ್ಲುಕೆರೆಯವರು

೫. ವೀಕ್ಷಕ ದಿನಪತ್ರಿಕೆ ಒಟ್ಟು ಪುಸ್ತಕ